

ಕಾಯಕವೇ ಕೈಲಾಸ

# ಸಿದ್ಧಗಂಗಾ



ಕನ್ನಡ ರಾಜ್ಯೋತ್ಸವ ಹಾಗೂ ದೀಪಾವಳಿ ಹಬ್ಬದ ಶುಭಾಶಯಗಳು

ಸಂಪುಟ : ೫೭ | ನವೆಂಬರ್ ೨೦೨೧ | ಸಂಚಿಕೆ : ೧೧



ರಾಜ್ಯ ಸರ್ಕಾರದಿಂದ ಕೊಡಮಾಡುವ ಪ್ರತಿಷ್ಠಿತ 'ಗಾಂಧಿ ಸೇವಾ ಪ್ರಶಸ್ತಿ'ಯನ್ನು ಸಿದ್ಧಗಂಗಾ ಮಠ ಹಾಗೂ ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಗೆ ನೀಡಲಾಗಿದ್ದು ಪ್ರಶಸ್ತಿಯನ್ನು ಸಿದ್ಧಗಂಗಾ ಮಠದ ಪರವಾಗಿ ಡಾ. ಬಿ. ಶಿವಪ್ಪನವರು ಅಕ್ಟೋಬರ್ ೨ ರಂದು ಬೆಂಗಳೂರಿನಲ್ಲಿ ನಡೆದ ಸಮಾರಂಭದಲ್ಲಿ ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿ ಅವರಿಂದ ಸ್ವೀಕರಿಸಿದರು. ಈ ಸಂದರ್ಭದಲ್ಲಿ ಸಚಿವರಾದ ಶ್ರೀ ಹಾಲಪ್ಪ ಆಚಾರ್, ಮಾಜಿ ಸಚಿವ ಶ್ರೀ ಎಚ್.ಕೆ. ಪಾಟೀಲ್ ಸೇರಿದಂತೆ ಅನೇಕ ಗಣ್ಯರು ಉಪಸ್ಥಿತರಿದ್ದರು.



ಅಕ್ಟೋಬರ್ ೨ ರಂದು ಸಿದ್ಧಗಂಗಾ ಮೆಡಿಕಲ್ ಕಾಲೇಜು ಹಾಗೂ ಸಂಶೋಧನಾ ಕೇಂದ್ರದ ನೂತನ ಜನರಲ್ ಬ್ಲಾಕ್‌ನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಸಂಸದ ಶ್ರೀ ಜಿ.ಎಸ್. ಬಸವರಾಜ್, ಶ್ರೀ ಟಿ.ಕೆ. ನಂಜುಂಡಪ್ಪ, ಡಾ. ಎಸ್. ಪರಮೇಶ್, ಪ್ರಾಂಶುಪಾಲರಾದ ಡಾ. ಶಾಲಿನಿ, ಶ್ರೀ ನಾಗಣ್ಣ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಹಾಸನದಲ್ಲಿರುವ ತಣ್ಣೀರುಹಳ್ಳ ಮಠದ ನೂತನ ಶ್ರೀಗಳ ಪಟ್ಟಾಧಿಕಾರಿ ಮಹೋತ್ಸವವನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ವಿವಿಧ ಮಠಗಳ ಹರಗುರು ಚರಮೂರ್ತಿಗಳು, ಗಣ್ಯರು ಉಪಸ್ಥಿತರಿದ್ದರು.



ಶ್ರೀ ಪುನೀತ್ ರಾಜ್‌ಕುಮಾರ್
(೧೯೭೫ – ೨೦೨೧)








## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೫೭ ನವೆಂಬರ್ ೨೦೨೧ ಸಂಚಿಕೆ : ೧೧


ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಅಧ್ಯಕ್ಷರು

ಪ್ರಧಾನ ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ

ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು :
ಕೆ.ಬಿ. ಶಿವಶಂಕರಯ್ಯ
ಮೊ : ೯೭೪೧೦ ೭೬೮೦೬

ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ವಿ. ಸೋಮಶೇಖರಯ್ಯ
ಎನ್.ವಿ. ಸತೀಶ್‌ಕುಮಾರ್

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್
ಬಿ-೭೧, ಕೆ.ಎಸ್.ಎಸ್.ಐ.ಡಿ.ಸಿ. ಕೈಗಾರಿಕನಗರ
ರಾಜಾಜಿನಗರ, ಬೆಂಗಳೂರು-೫೬೦ ೦೧೦

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೩೨೨.


## ಒಳಪುಟಗಳಲ್ಲಿ ..................




ಚಂದಾ ವಿವರ :
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00


email: siddaganganews@gmail.com

ಲೇಖಕರ ಅಭಿಪ್ರಾಯಗಳು ಪತ್ರಿಕೆಯ ಅಭಿಪ್ರಾಯಗಳಲ್ಲ

# ಪ್ರಧಾನ ಸಂಪಾದಕರ ನುಡಿ........

ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಹಾಗೂ ಗಾಂಧಿ ಸ್ಮಾರಕ ನಿಧಿ ವತಿಯಿಂದ ಕೊಡಮಾಡುವ ಪ್ರತಿಷ್ಠಿತ 'ಗಾಂಧಿ
ಸೇವಾ ಪ್ರಶಸ್ತಿ'ಯನ್ನು ಶ್ರೀ ಸಿದ್ಧಗಂಗಾ ಕ್ಷೇತ್ರ ಹಾಗೂ ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಗೆ ನೀಡಿ ಗೌರವಿಸಿರುವುದು ನಡೆದಾಡುವ ದೇವರು,
ನಮ್ಮೆಲ್ಲರ ಆರಾಧ್ಯದೈವ ತ್ರಿವಿಧ ದಾಸೋಹಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೮೯ ವರ್ಷಗಳ
ಸುದೀರ್ಘ ಸಮಾಜಮುಖಿ ಸೇವೆಗಾಗಿ ನೀಡಿದ ಮಹೋನ್ನತ ಗೌರವ, ಶ್ರೀ ಸಿದ್ಧಗಂಗಾ ಕ್ಷೇತ್ರ ಹಾಗೂ ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ
ಅನನ್ಯ ಸೇವೆ ಇತಿಹಾಸದ ಪುಟಗಳಲ್ಲಿ ದಾಖಲಾಗಿರುವಂತಹದು. ಅಕ್ಟೋಬರ್ ೨ ರಂದು ಗಾಂಧಿ ಜಯಂತಿ ಶುಭ ಸಂದರ್ಭದಲ್ಲಿ
ಶ್ರೀಮಠದ ಪರವಾಗಿ ಡಾ. ಶಿವಪ್ಪನವರು ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿ ಅವರಿಂದ ಪ್ರಶಸ್ತಿ ಸ್ವೀಕರಿಸಿದರೆಂದು ತಿಳಿಸಲು
'ಸಿದ್ಧಗಂಗಾ' ಹರ್ಷಿಸುತ್ತದೆ.

* * *

ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ ಪರಪೂರ್ಣವಾಗಲು ಮೆಡಿಕಲ್ ಕಾಲೇಜಿನ ಕೊರತೆಯಿತ್ತು. ಲಿಂ. ಪರಮಪೂಜ್ಯ ಡಾ. ಶ್ರೀ ಶ್ರೀ
ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಾಶೀರ್ವಾದ ಹಾಗೂ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಕ್ರಿಯಾಶೀಲತೆ,
ಸಂಕಲ್ಪ ಸಿದ್ಧಿಯಿಂದ ಅಕ್ಟೋಬರ್ ೨ ರಂದು ಸಿದ್ಧಗಂಗಾ ಮೆಡಿಕಲ್ ಕಾಲೇಜು ಹಾಗೂ ಸಂಶೋಧನಾ ಕೇಂದ್ರದ ನೂತನ ಜನರಲ್
ಬ್ಲಾಕ್‌ನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಲೋಕಾರ್ಪಣೆ ಮಾಡುವುದರ ಮೂಲಕ ಬಹುದಿನಗಳ ಕನಸನ್ನು
ಸಾಕಾರಗೊಳಿಸಿದರು. ಇದು ಶ್ರೀಮಠದ ಭಕ್ತರು ಹಾಗೂ ಅಭಿಮಾನಿಗಳಿಗೆ ಸಂತೋಷವನ್ನುಂಟು ಮಾಡಿದೆ.

* * *

ಅರವತ್ತಾರನೇ ಕನ್ನಡ ರಾಜ್ಯೋತ್ಸವವನ್ನು ನವೆಂಬರ್ ತಿಂಗಳಲ್ಲಿ ಸಡಗರ ಸಂಭ್ರಮದಿಂದ ಆಚರಿಸಲಾಗುತ್ತದೆ. ನಮ್ಮ ಅಸ್ತಿತ್ವದ
ಗುರುತಿಗೆ ಈಗ ಉಳಿದಿರುವುದೆಂದರೆ ನವೆಂಬರ್ ಒಂದೇ. ಕನ್ನಡಿಗರು ಆತ್ಮಪರೀಕ್ಷೆಮಾಡಿಕೊಳ್ಳಬೇಕು. ಕನ್ನಡ ರಾಜ್ಯೋತ್ಸವ ಕೇವಲ
ಒಂದು ದಿನದ ಸಡಗರ-ಸಂಭ್ರಮಗಳ ಪ್ರದರ್ಶನವಾಗಬಾರದು. ನಮಗೆ ನಮ್ಮ ನಾಡು-ನುಡಿಗಳ ಪರಂಪರೆಯ ಪ್ರಜ್ಞಾ ಜಾಗೃತಿಯ
ಸಂದರ್ಭವಾಗಬೇಕು. ನಮ್ಮ ಅಭಿಮಾನ ಪ್ರಾಮಾಣಿಕವಾಗಿರಬೇಕು.

ವಾಸ್ತವವಾಗಿ ನವೆಂಬರ್ ೧, ನಾವೆಲ್ಲ ಕನ್ನಡ-ಕನ್ನಡಿಗ, ಕರ್ನಾಟಕಗಳ ಹಿತರಕ್ಷಣೆಗಾಗಿ ಸಮರ್ಪಣ ಭಾವದಿಂದ ದುಡಿಯುವ
ಸಂಕಲ್ಪ ದಿನವಾಗಬೇಕು. "ಹಿಂದಣ ಹೆಜ್ಜೆಯ ನೋಡಿ ಕಂಡಲ್ಲದೆ ನಿಂದ ಹೆಜ್ಜೆಯ ಸರಿಯಲಾಗದು' ಎಂದಿರುವ ವೈರಾಗ್ಯಮೂರ್ತಿ
ಅಲ್ಲಮಪ್ರಭುವಿನ ಮಾತಿನಂತೆ ನಾವು ನಮ್ಮ ಪರಂಪರೆಯನ್ನು ಸ್ಮರಿಸಿಕೊಳ್ಳಬೇಕು. ನಮಗಿರುವ ಹಿನ್ನೆಲೆಯೇ ನಮ್ಮ ಮುನ್ನಡೆಗೆ
ಪ್ರೇರಕವಾಗಬೇಕು. ಪ್ರಸ್ತುತ ಸಮಸ್ಯೆಗಳನ್ನು ನೀಗಿ ಹೊಸ ಹೆಜ್ಜೆಯಿಡುವ ಆತ್ಮವಿಶ್ವಾಸ ತುಂಬಬೇಕು.

ನಮ್ಮ ನಾಡಿನ ಪರಂಪರೆ ಸುದೀರ್ಘವಾದುದು, ಸ್ಮರಣೀಯವಾದುದು. ಪ್ರಾಮಾಣಿಕವೆನಿಸುವ 'ಮಹಾಭಾರತ'ದಲ್ಲಿ ಕರ್ನಾಟಕ
ಶಬ್ದದ ಪ್ರಸ್ತಾಪವಿದೆ. ಒಂದು ಕಾಲದಲ್ಲಿ ಅಶೋಕ ಚಕ್ರವರ್ತಿ ಈ ನೆಲವನ್ನು ಆಳಿದ್ದಾನೆ. ಶಾತವಾಹನರು, ಪಲ್ಲವರು, ಕದಂಬರು,
ಗಂಗರು, ರಾಷ್ಟ್ರಕೂಟರು, ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು, ಕೆಳದಿ-ಕಿತ್ತೂರು ವಂಶದವರು, ಮೈಸೂರು ಅರಸರು
ಈ ನಾಡಿನ ರಾಜ್ಯಭಾರ ನಡೆಸಿದ್ದಾರೆ. ಕನ್ನಡ ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸಿದ ಪಂಪ, ರನ್ನ, ಜನ್ನ, ಪೊನ್ನ, ಹರಿಹರ,
ರಾಘವಾಂಕ, ಚಾಮರಸ, ಲಕ್ಷ್ಮೀಶ, ಲಕ್ಕಣ್ಣ ದಂಡೇಶ, ಸರ್ವಜ್ಞ, ಕನಕ, ಪುರಂದರದಾಸರು, ಷಡಕ್ಷರ, ನಾಗಚಂದ್ರ, ನಯಸೇನ,
ವಿಶ್ವಸೋಜಗದ ಹನ್ನೆರಡನೆಯ ಶತಮಾನದ ಬಸವಾದಿ ವಚನಕಾರರು, ಇವರೆಲ್ಲ ನಮ್ಮವರು. ಕನ್ನಡದ ಸಾಂಸ್ಕೃತಿಕ ದಿವ್ಯಚೇತನರು.

ಪ್ರಸ್ತುತ ನಮ್ಮ ರಾಜ್ಯೋತ್ಸವ ಆಚರಣೆಗಳು ಕನ್ನಡಿಗರ ಸ್ಥಿತಿ ಗತಿಗಳತ್ತ ಸಾರ್ವತ್ರಿಕ ಗಮನ ಸೆಳೆದು ಜನರಲ್ಲಿ ಕನ್ನಡ ಜಾಗೃತಿ
ಮೂಡಿಸಿ, ಕನ್ನಡಿಗರಲ್ಲಿ ಸ್ವಾಭಿಮಾನ, ಆತ್ಮಸ್ಥೈರ್ಯ ಹಾಗೂ ಆತ್ಮವಿಶ್ವಾಸಗಳನ್ನು ತುಂಬುವ ಮತ್ತು ಕನ್ನಡ ಭಾಷೆ, ಸಾಹಿತ್ಯ-
ಸಂಸ್ಕೃತಿಗಳ ಅಭಿಮಾನವನ್ನು ಅಚ್ಚೊತ್ತುವ ಸಂದರ್ಭಗಳಾಗಬೇಕು. ಕನ್ನಡಿಗರು ಒಂದು ಸಂಘಟಿತ ಶಕ್ತಿಯಾಗಿ, ಒಂದೇ ದನಿಯಾಗಿ
ಆಡಳಿತದ ಹೊಣೆ ಹೊತ್ತಿರುವ ಜನಪ್ರತಿನಿಧಿಗಳು ಮತ್ತು ಅಧಿಕಾರಿಗಳಿಗೆ ಎಚ್ಚರಿಕೆ ನೀಡುವಂತಾಗಬೇಕು.

ಈಗ ನಮ್ಮ ಮುಂದಿರುವುದು ಕರ್ನಾಟಕದ ಪರಂಪರೆಗೆ ಹಿಂದಿನ ಗೌರವದ ಸ್ಥಾನ ದೊರಕುವಂತೆ ನೋಡಿಕೊಳ್ಳಬೇಕು. ನಮ್ಮೆಲ್ಲ
ಧ್ಯೇಯ-ಧೋರಣೆಗಳು, ಕಾರ್ಯವಿಧಾನಗಳು ಒಟ್ಟು ಕನ್ನಡ-ಕನ್ನಡಿಗ-ಕರ್ನಾಟಕ ಕ್ಷೇಮಾಭ್ಯುದಯವನ್ನೇ
ಗುರುಯಾಗಿಟ್ಟುಕೊಳ್ಳಬೇಕು. ಅಂತಾದರೆ ಮಾತ್ರ ರಾಜ್ಯೋತ್ಸವದ ಆಚರಣೆ ಅರ್ಥಪೂರ್ಣವಾಗುತ್ತದೆ.

ಪ್ರೊ. ಹೆಚ್.ವಿ. ವೀರಭದ್ರಯ್ಯ



# ಶ್ರೀವಾಣಿ



ಪರಮಾತ್ಮನಿಂದ ಪ್ರಕೃತಿಯ ಒಂದಂಗವಾಗಿ ಸೃಷ್ಟಿಗೊಂಡ ಮಾನವ ಮೊದಮೊದಲು ಪ್ರಕೃತಿಯನ್ನೇ ದೇವರೆಂಬ ಭಾವನೆಯಿಂದ ಪೂಜಿಸತೊಡಗಿದ. ಪಂಚಭೂತಗಳನ್ನೇ ಆರಾಧನೆ ಮಾಡತೊಡಗಿದ. ಬರಬರುತ್ತಾ ಅವನ ಉಪಾಸನಾಕ್ರಮಗಳಲ್ಲಿ ಹಲವಾರು ಬಗೆಗಳು ಉಂಟಾದವು. ಅವುಗಳಲ್ಲಿ ಮುಖ್ಯವಾಗಿ ನಾಲ್ಕನ್ನು ಗುರ್ತಿಸಬಹುದು.

ಮೊದಲನೆಯದು ನಿರಾಕಾರ ವಸ್ತುವಿನ ಉಪಾಸನೆ. ಇದು ಎಲ್ಲರಿಗೂ ಸಾಧ್ಯವಿಲ್ಲ. ಆಧ್ಯಾತ್ಮ ಸಾಧನೆಯಲ್ಲಿ ಬಹಳ ಮೇಲ್ಮಟ್ಟಕ್ಕೇರಿದ ಸಾಧಕರಿಗೆ ಮಾತ್ರ ಸಾಧ್ಯ. ಇದು ಎಲ್ಲದಕ್ಕಿಂತಲೂ ಶ್ರೇಷ್ಠತಮವಾದದ್ದು. ಇದೇ ನಿರ್ಗುಣೋಪಾಸನೆ.

ಎರಡನೆಯದು ಸಾಕಾರೋಪಾಸನೆ. ಇದು ದೇವಾಲಯ ಸಂಸ್ಕೃತಿಗೆ ಕಾರಣವಾದದ್ದು. ಸಾಂಘಿಕ ಶಕ್ತಿಗೆ ಮೂಲವಾದದ್ದು. ಬಹುಜನರು ಮಾಡುವ ಉಪಾಸನಾಕ್ರಮ. ಇದನ್ನೇ ಮೂರ್ತಿಪೂಜೆ ಎಂದು ಕರೆಯುತ್ತಾರೆ. ಇದು ಸಾಧಾರಣಾ ಮಾರ್ಗ. ಇದೇ ಸಗುಣೋಪಾಸನೆ.

ಮೂರನೆಯದು ಅವತಾರಪೂಜೆ. ರಾಮ, ಕೃಷ್ಣ, ಬುದ್ಧ ಮುಂತಾದ ವ್ಯಕ್ತಿಗಳನ್ನು ಅವತಾರ ಪುರುಷರೆಂದು ಬಗೆದು ಆ ವ್ಯಕ್ತಿಗಳನ್ನು ಪೂಜೆ ಮಾಡುವುದು. ಅವತಾರಪುರುಷರ ಲೋಕೋತ್ತರ ಕಲ್ಯಾಣ ಗುಣಗಳನ್ನು ಪರಮಾತ್ಮನ ಅನಂತಕಲ್ಯಾಣಗುಣಗಳೊಡನೆ ಆರೋಪಿಸಿ ಹೊಗಳುವುದು. ಈ ಉಪಾಸನಾ ಕ್ರಮದಲ್ಲಿ, ತತ್ತ್ವನಿಷ್ಠೆಗಿಂತಲೂ ವ್ಯಕ್ತಿನಿಷ್ಠೆ ಅಧಿಕವಾಗಿರುತ್ತದೆ.

ಕೊನೆಯದು ಕ್ಷುದ್ರೋಪಾಸನೆ. ಮಾರಿ, ಮಸಣಿ, ಮಸಣಿ, ಮರ, ಮಡಿಕೆಗಳನ್ನು ದೈವವೆಂದು ಪೂಜಿಸುವುದು. ಪ್ರತಿಷ್ಠಿತ ಸಮಾಜದವರಿಂದ ಶೋಷಿತರಾದ ಕೆಳವರ್ಗದ ಜನ ಮಾಡುವ ಪೂಜೆ. ಅಜ್ಞಾನ-ಮೌಢ್ಯತೆ-ಮೂಢನಂಬಿಕೆಗಳನ್ನು ಹುಟ್ಟುಹಾಕಿದ ಉಪಾಸನಕ್ರಮ ಇದು. ಇದು ಕೀಳುಮಟ್ಟದ ಉಪಾಸನೆ.

ಈ ನಾಲ್ಕೂ ವಿಧವಾದ ಉಪಾಸನಾಕ್ರಮದಲ್ಲಿ ಕ್ಷುದ್ರೋಪಾಸನೆಯನ್ನು ಬಿಟ್ಟುಬಿಡಬೇಕು. ಅವತಾರ ಪೂಜೆಯೂ ಸಲ್ಲದು. ಇನ್ನು ಸಾಕಾರಪೂಜೆ ಸಾಧಾರಣವಾದದ್ದು. ಇದೇನಿದ್ದರೂ ನಿರಾಕಾರ ವಸ್ತುವಿನಲ್ಲಿ ನಿಷ್ಠೆಯನ್ನು ಬೆಳೆಸುವ ನಿಚ್ಚಣಿಗೆಯಾಗಬೇಕು. ಇದೇ ಪರಮವಲ್ಲ. ಆದ್ದರಿಂದ ಎಲ್ಲಕ್ಕಿಂತಲೂ ನಿರಾಕಾರೋಪಾಸನೆಯೇ ಸರ್ವೋತ್ತಮವಾದದ್ದು.

ಆದರೆ ಇದಕ್ಕೆ ಭೂಮಿಕೆಯಾಗಿ ದೈವದಲ್ಲಿ ಶ್ರದ್ಧೆ, ದೇವರಲ್ಲಿ ನಂಬಿಕೆ ಬರಬೇಕು. ಇದಕ್ಕಾಗಿಯೇ ಶ್ರದ್ಧಾಭಕ್ತಿ ಕೇಂದ್ರಗಳಾದ ದೇವಾಲಯಗಳ ನಿರ್ಮಿತಿಯು ಸಾಮಾನ್ಯ ಜನಸಮುದಾಯದ ದೃಷ್ಟಿಯಿಂದ ಯಾವತ್ತೂ ಅವಶ್ಯವಿರುತ್ತದೆ.

(ಮೇ ೨, ೧೯೬೫)

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ



**ಕತ್ತಲೆಯನೊಳಕೊಮ್ಡ ಬೆಳಗಿನಂತೆ ಪಕ್ಷಿಯನೊಳಕೊಂಡ ತತ್ತಿಯಂತೆ**
**ಮುತ್ತನೊಳಕೊಂಡ ಚಿಪ್ಪಿನಂತೆ ಸಾಗರವನೊಳಕೊಂಡ ಶಶಿಯಂತೆ**
**ಜಗವನೊಳಕೊಂಡ ಆಕಾಶದಂತೆ ಎನ್ನ ನೀವು ಒಳಕೊಂಡಿರಿಯಾಗಿ**
**ನಾನೊ ನೀನೊ ಏನೆಂದರಿಯೆನಯ್ಯಾ**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥**

ಕತ್ತಲೆಯನೊಳಕೊಂಡ ಬೆಳಗಿನಂತೆ; ಕತ್ತಲೆಯ - ಕಾವಳವನ್ನು, ಒಳಕೊಂಡ-ಅವಗ್ರಹಿಸಿಕೊಂಡ, ಬೆಳಗಿನಂತೆ-ಪ್ರಕಾಶದ ಹಾಂಗೆ, ಭಕ್ತನ ಆಚಾರಲಿಂಗವು ಒಳಕೊಂಡಿತ್ತು. ಪಕ್ಷಿಯನೊಳಕೊಂಡ ತತ್ತಿಯಂತೆ; ಪಕ್ಷಿಯ-ಹಕ್ಕಿಯನು, ಒಳಕೊಂಡ-ಅವಗ್ರಹಿಸಿ ಕೊಂಡ, ತತ್ತಿಯಂತೆ-ಮೊಟ್ಟೆಯ ಹಾಂಗೆ, ಮಹೇಶ್ವರನ ಗುರು ಲಿಂಗವು ಒಳಕೊಂಡಿಪ್ಪುದು; ಮುತ್ತನೊಳಕೊಂಡ ಚಿಪ್ಪಿನಂತೆ; ಮುತ್ತ-ಮೌಕ್ತಿಯವನು, ಒಳಕೊಂಡ-ಅವಗ್ರಹಿಸಿಕೊಂಡ, ಚಿಪ್ಪಿನಂತೆ-ಶೂಕ್ತಿಕದ ಹಾಂಗೆ, ಪ್ರಸಾದಿಯ ಶಿವಲಿಂಗವು ಒಳಕೊಂಡಿಪ್ಪುದು; ಸಾಗರವನೊಳಕೊಂಡ ಶಶಿಯಂತೆ; ಸಾಗರವ-ಸಮುದ್ರವನು, ಒಳಕೊಂಡ-ಅವಗ್ರಹಿಸಿಕೊಂಡ, ಶಶಿಯಂತೆ-ಚಂದ್ರಮನ ಹಾಂಗೆ, ಪ್ರಾಣಲಿಂಗಿಯ ಜಂಗಮಲಿಂಗವು ಒಳಕೊಂಡಿಪ್ಪುದು; ಜಗವನೊಳ ಕೊಂಡ ಆಕಾಶದಂತೆ; ಜಗವ-ಬ್ರಹ್ಮಾಂಡವನು, ಒಳಕೊಂಡ-ಅವಗ್ರಹಿಸಿಕೊಂಡ, ಆಕಾಶದಂತೆ-ಅಂಬರದ ಹಾಂಗೆ, ಶರಣನ ಪ್ರಸಾದ ಲಿಂಗವು ಒಳಕೊಂಡಿಪ್ಪುದು; ಎನ್ನ ನೀವು ಒಳಕೊಂಡಿರಿಯಾಗಿ; ಎನ್ನ - ಐಕ್ಯನ ನೀವು-ಮಹಾಲಿಂಗವು ಒಳಕೊಂಡಿರಿಯಾಗಿ-ಅವಗ್ರಹಿಸಿಕೊಂಡಿರ್ಪಿರಿಯಾಗಿ, ನಾನೊ ನೀನೊ -ಶರಣನೊ ಲಿಂಗವೊ, ಏನೆಂದರಿಯೆನಯ್ಯಾ-ಏನೆಂದು ತಿಳಿಯೆನಯ್ಯಾ, ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು-ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು-ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ವಿನಯದನುಭಾವದ ವಿರತಿಯ ಗಿರಿಶೃಂಗ
ಅನುನಯದ ಅರಿವಿನ ಸಿರಿತುಂಗ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕರದಲ್ಲಿ ಕುರುಹಿಟ್ಟೆ ಶಿರದಲ್ಲಿ ಕರವಿಟ್ಟೆ
ಉರದಲ್ಲಿ ಅರಿವಿಟ್ಟು ಸಲಹಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಾನಾವರ್ಣದ ಮನವ ಏನ ಮಾಡುವೆನಯ್ಯಾ
ನೀನಾದರೂ ಹಸಗೊಳಿಸಿ ಸಲಹಯ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೆರೆನಂಬು ನೆರೆನಂಬು ಕರಸ್ಥಲದ ಕುರುಹನು
ಗುರು ನಿನಗೆ ಅದು ತಾನೆ ಅರಿಯೆಂದ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು

ಕರುಣಿವರ ಶ್ರೀಗುರುವೆ ಕಾಲ ಹರಶ್ರೀಗುರುವೆ
ಕರ್ಮಹರ ಶ್ರೀಗುರುವೆ ನಿರ್ಮಳವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನ್ನೊಳಗ ತಿಳಿಯಲು ಜಗಸೋಜಿಗ ಪಡುತಿದೆ
ನಿನ್ನೊಳಗೆ ಲೋಕವೆನಿತಿಹವು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಲಜ್ಞಾನಿ ಗುರುವೆ ಕರ್ಮ ವಿದೂರನೆ
ನಿತ್ಯಸಂತೃಪ್ತ ಶಿವಸತ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮಿಂದ ಬದುಕಿದೆನು ನಿಮ್ಮಿಂದ ಬಾಳಿದೆನು
ನಿಮ್ಮಿಂದ ನಿಜವನರಿತೆನು । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲೋಗರ ಜೊತೆಗಿರುವೆ ಲೋಗನಾಗದಿರುವೆ
ಲೋಗರ ಲೋಭಕೆ ನಗುತಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮ ಸಿರಿಪಾದುಕೆಗೆ ಏನು ಸಮಬಹುದಯ್ಯ
ನಿಮ್ಮ ನುಡಿಲಿಂಗಕೆ ಸಮವೇನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**ಪ್ರೊ. ಹೆಚ್.ವಿ. ವೀರಭದ್ರಯ್ಯ**



## ಗೌರವ ಪುರಸ್ಕಾರ

# ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆ ಹಾಗೂ ಸಿದ್ಧಗಂಗಾ ಮಠಕ್ಕೆ ಪ್ರತಿಷ್ಠಿತ ಗಾಂಧಿ ಸೇವಾ ಪ್ರಶಸ್ತಿಯ ಗರಿಮೆ





ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ ಕೊಡಮಾಡುವ ಪ್ರತಿಷ್ಠಿತ ಗಾಂಧಿ ಸೇವಾ ಪ್ರಶಸ್ತಿ ೨೦೨೧ನೇ ಸಾಲಿಗೆ ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆ ಹಾಗೂ ಸಿದ್ಧಗಂಗಾ ಮಠಕ್ಕೆ ಸಂದಿದೆ. ಹೈಕೋರ್ಟ್ ನಿವೃತ್ತ ನ್ಯಾಯಮೂರ್ತಿ ಅಶೋಕ್ ಬಂಗಾರೆವ್ವಾ ಅವರ ಅಧ್ಯಕ್ಷತೆಯ ಆಯ್ಕೆ ಸಮಿತಿ ಆಯ್ಕೆ ಮಾಡಿರುವುದು ತ್ರಿವಿಧ ದಾಸೋಹಿ, ಪದ್ಮಭೂಷಣ, ಕರ್ನಾಟಕ ರತ್ನ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತೊಂಭತ್ತು ವರ್ಷಗಳ ಸುದೀರ್ಘ ಕಾಲ ಸಮಾಜಮುಖಿ ಸೇವೆಗಾಗಿ ನೀಡಿದ ಗೌರವದ ದ್ಯೋತಕವಾಗಿದೆ.

ಪ್ರಶಸ್ತಿಯು ೫ ಲಕ್ಷ ರೂ. ಹಾಗೂ ಸ್ಮರಣಿಕೆಯನ್ನೊಳಗೊಂಡಿದೆ. ಅಕ್ಟೋಬರ್ ೨ ರಂದು ಬೆಂಗಳೂರಿನಲ್ಲಿ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಹಾಗೂ ಗಾಂಧಿ ಸ್ಮಾರಕ ನಿಧಿ ಸಂಯುಕ್ತ ಆಶ್ರಯದಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿ ಅವರು "ಗಾಂಧಿ ಸೇವಾ ಪ್ರಶಸ್ತಿ"ಯನ್ನು ಪ್ರದಾನ ಮಾಡಿದರು. ಸಿದ್ಧಗಂಗಾ ಮಠದ ಪರವಾಗಿ ಡಾ. ಬಿ. ಶಿವಪ್ಪ ಅವರು ಪ್ರಶಸ್ತಿಯನ್ನು ಸ್ವೀಕರಿಸಿದರು. ಈ ಸಂದರ್ಭದಲ್ಲಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಹಾಗೂ ಗಣಿ ಮತ್ತು ಭೂ ವಿಜ್ಞಾನ ಸಚಿವ ಶ್ರೀ ಹಾಲಪ್ಪ ಆಚಾರ್, ಜಲಸಂಪನ್ಮೂಲ ಸಚಿವರಾದ ಶ್ರೀ ಗೋವಿಂದ ಎಂ. ಕಾರಜೋಳ, ಸಂಸದರಾದ ಶ್ರೀ ಶಿವಕುಮಾರ ಉದಾಸಿ, ರಾಜ್ಯಸಭಾ ಸದಸ್ಯರಾದ ಡಾ. ಎಲ್. ಹನುಮಂತಯ್ಯ, ನಿವೃತ್ತ ನ್ಯಾಯಮೂರ್ತಿ ಶ್ರೀ ಅಶೋಕ್ ಬಿ. ಹಂಚಗೇರಿ, ಶಾಸಕರಾದ ಶ್ರೀ ಎಚ್.ಕೆ. ಪಾಟೀಲ್, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಶ್ರೀ ವೂಡೆ ಪಿ. ಕೃಷ್ಣ, ವಾರ್ತಾ ಮತ್ತು ಸಂಪರ್ಕ ಇಲಾಖೆ ಹಾಗೂ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿ ಶ್ರೀ ಮಂಜುನಾಥ್ ಪ್ರಸಾದ್, ಆಯುಕ್ತ ಶ್ರೀ ಜಿ. ಜಗದೀಶ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಸುಪ್ರಭಾತ

# ಶ್ರೀ ಶಿವಕುಮಾರ ಸದ್ಗುರುಪಾದಸ್ತವನಂ

– ಕೋ.ರಂ. ಬಸವರಾಜು *

ಭಕುತ ಜನರ ನಿಜ ಮಾನಸಾಂಬುಜದೊಳು
ಅಕ್ಕರದಿ ರಾಜಿಪುದು ನಿನ್ನ ಪಾದ
ಗುರುವೊಲಿದ ವರಶಿಷ್ಯ ಹೃದಯದಿ ಹೊಳೆವುದು
ಗುರುದೇವ ಶಿವಕುವರ ನಿನ್ನ ಪಾದ. ॥ ಪಲ್ಲವಿ ॥

ಶಿಷ್ಟಜನ ಸುನಮಿತ ಉತ್ತಮಾಂಗದೊಳು
ಶಿಷ್ಟಮಾಗಿ(ಪರಿ) ಶೋಭಿಪುದು ನಿನ್ನಪಾದ
ಶರಣ ಜನರು ನಿರುತ ಚರಣ ಸ್ಮರಿಸಲು ಸರ್ವ
ದುರಿತವ ಕಳೆವುದು ನಿನ್ನಪಾದ
ಶಿರವ ಹಚ್ಚಿದ ಜನರ ಬ್ರಹ್ಮ ಲಿಖಿತವ ತೊಡೆದು
ಪರಮ ಮೋಕ್ಷವ ಕೊಟ್ಟಿತ್ತು ನಿನ್ನಪಾದ
ಪರಿಭವಾಬ್ಧಿಯೊಳು ನರರ ನೆರೆದಾಂಟಿಸುವ
ಪರಮ ನಾವೆಯು ನಿನ್ನ ಭವ್ಯಪಾದ. ॥ ೧ ॥

ದೀನಜನರ ಸುರ ಧೇನುವಾಗೆಸೆವುದು ಭೂ
ವಿನುತ ಚರಿತನೆ ನಿನ್ನ ಪಾದ
ಅನಾಥಮಕ್ಕಳಂತರಂಗ ಮಂಟಪದೊಳಗೆ
ಅನವರತ ಶೋಭಿಪುದು ನಿನ್ನಪಾದ
ಜಾತಿಕುಲಗೋತ್ರದ ಸೀಮೆಯನು ತಾ ದಾಂಟಿ
ಅತಿಶಯದಿ ಮೆರೆಯಿತ್ತು ನಿನ್ನಪಾದ
ಹೀನಮನದಿ ನಿನ್ನ ನಿಂದೆಗೈದ ಕುಜನರ
ಮೌನದಿಂ ಸುಟ್ಟುರುಹಿತ್ತು ನಿನ್ನಪಾದ. ॥ ೨ ॥

ಬ್ರಹ್ಮಜಗಕಿಕ್ಕಿದ ಹೊನ್ನೆಣ್ಣು ಮಣ್ಮಲವನು
ಬ್ರಹ್ಮತೇಜದಿ ದಹಿಸಿತ್ತು ನಿನ್ನಪಾದ
ನೆಟ್ಟನೆ ಮನೆಯೊಳಗೆ ಹೊಕ್ಕಗೂಗೆಯನು ತಾ
ನಟ್ಟಿ ಕಳುಹಿದುದು ನಿನ್ನಪಾದ
ನೊಂದುಬೆಂದ ಜನರಾವಗಂ ಭಜಿಸಲು ನಿನ್ನ
ಅಂದು ಮುದವೀವುದು ನಿನ್ನಪಾದ
ನಿತ್ಯನಿರಂಜನನ ನಿರವಯವೆನುತಿಹ
ಸತ್ಯಸಾಕಾರವು ನಿನ್ನ ದಿವ್ಯಪಾದ ॥ ೩ ॥

ಮುನ್ನ ತಾ ಮಾಡಿದ । ಪೂಜೆಫಲಂಗಳಿಂದಲ್ಲದೆ
ಇನ್ನು ತಾ ಕಾಣದದು ನಿನ್ನಪಾದ
ಧ್ಯಾನ ಮೌನಯೋಗ । ಮಂತ್ರಾದಿ ಸಿದ್ಧಿಗಳ
ತಾನೆ ತಾಣವಾಗಿಹುದು ನಿನ್ನಪಾದ
ಬಸವ ಬೆಳಕನು ತಾ ಚೆಲುವಾಂತು ಧರೆಯೊಳಗೆ
ಹಸನು ಮಾಡಿತು ತಿರೆಯ ನಿನ್ನಪಾದ
ವರಲಿಂಗಪೂಜೆಯೊಳು ನೆರೆದ ಶರಣ ತಿಂತಿಣಿಗೆ
ಚರೋದಕವ ನೀಡಿ ಪೊರೆಯಿತ್ತು ನಿನ್ನಪಾದ. ॥ ೪ ॥

ಜಗದ ಜಂಗಮವಾಗಿ ಬಸವತತ್ತ್ವವ ಬೋಧಿಸುತೆ
ಜಗವ ಬೆಳಗಿತು ನಿನ್ನ ಭವ್ಯಪಾದ
ಜಂಗಮರೂಪಿಯ ಜಗವ ಪೊರೆಯುತಿಹ
ಜಂಗಮಕೆ ಸಾಕ್ಷಿಯು ನಿನ್ನಪಾದ
ಜಗದ ಬೇಗೆಯನು ದಿನದಿನವು ತಾ ಹೊತ್ತು
ಜಗಕೆ ತಂಪೆರೆದುದೋ ನಿನ್ನಪಾದ
ಗುರುವೆ ನಿತ್ಯವು ಭಜಿಪ ಎನ್ನ ಸಂರಕ್ಷಿಸಲಿ
ಗುರುದೇವ ಶಿವಕುವರ ನಿನ್ನ ಭವ್ಯಪಾದ. ॥ ೫ ॥



ಸೇವೆ, ತ್ಯಾಗ, ಮಾನವೀಯತೆಗಳನ್ನು ಬಿತ್ತಿದವರು ಧರ್ಮದೀಪಕರು. ಅವರು ಸಾರ್ವಕಾಲಿಕ ಸ್ಮರಣೀಯರು. ಅವರ ಸಾಲಿನಲ್ಲಿ ಬಸವಣ್ಣನವರೂ ಒಬ್ಬರು. ಅವರು ತುಳಿದ ಹಾದಿ ವಿಶಿಷ್ಟವಾದದ್ದು, ವಿಚಾರಪೂರ್ಣವಾದದ್ದು, ಆಚಾರ ಸಮನ್ವಿತವಾಗಿ ವಿನೂತನವೆನಿಸಿದ್ದು. ಬಸವಣ್ಣನವರು ಬಿತ್ತಿದ್ದು, ಬೆಳೆದದ್ದು ಕ್ರಿಯಾಜ್ಞಾನ ಸಮನ್ವಿತವಾದ ಮಾನವ ಧರ್ಮ. ಅದು ಅಷ್ಟಕ್ಕೇ ಸೀಮಿತವಾಗಲಿಲ್ಲ. 'ಸಕಲ ಜೀವರಿಗೆ ಲೇಸನೇ ಬಯಸುವ' ವಿಶ್ವಧರ್ಮವಾಯಿತು.

* ನಿವೃತ್ತ ಪ್ರಾಧ್ಯಾಪಕರು, 'ಮಧುಕೇಶ್ವರ ನಿಲಯ, ಶಿನೇ ಕ್ರಾಸ್', ಎಸ್.ಐ.ಟಿ. ಬಡಾವಣೆ, ತುಮಕೂರು.



# ಸಿದ್ಧಗಂಗಾ ಮೆಡಿಕಲ್ ಕಾಲೇಜು ಹಾಗೂ ಸಂಶೋಧನಾ ಕೇಂದ್ರದ ನೂತನ ಬ್ಲಾಕ್ ಲೋಕಾರ್ಪಣೆ



ಅಕ್ಟೋಬರ್ ೨ ರಂದು ತುಮಕೂರಿನಲ್ಲಿ ಸಿದ್ಧಗಂಗಾ ಮೆಡಿಕಲ್ ಕಾಲೇಜು ಹಾಗೂ ಸಂಶೋಧನಾ ಕೇಂದ್ರದ ನೂತನ ಬ್ಲಾಕ್‌ನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಲೋಕಾರ್ಪಣೆ ಮಾಡಿ "ಗಾಂಧೀಜಿಯವರ ಸ್ವಸ್ಥ ಭಾರತದ ಕನಸಿನಂತೆ ಅಶಕ್ತರಿಗೆ, ಆರ್ಥಿಕ ದುರ್ಬಲರಿಗೆ ಚಿಕಿತ್ಸೆ ನೀಡಲು ಸಿದ್ಧಗಂಗಾ ಆಸ್ಪತ್ರೆಯಲ್ಲಿ ಸಾಮಾನ್ಯ ಹೊರ ರೋಗಿಗಳ ವಿಭಾಗವನ್ನು ಪ್ರಾರಂಭಿಸಿದ್ದು, ಪ್ರತಿಯೊಬ್ಬರಿಗೂ ಆರೋಗ್ಯ ದೊರೆಯುವಂತೆ ಮಾಡುವುದು ಆಸ್ಪತ್ರೆಯ ಗುರಿಯಾಗಿದೆ" ಎಂದರು.

ಪೂಜ್ಯರು ತಮ್ಮ ಮಂಗಳ ನುಡಿಗಳಲ್ಲಿ "ಗಾಂಧೀಜಿಯವರ ತತ್ತ್ವಾದರ್ಶಗಳನ್ನು ದಾರಿದೀಪವಾಗಿಟ್ಟುಕೊಂಡು ಅವರ ಕನಸಿನಂತೆ ಗ್ರಾಮೀಣ ಪ್ರದೇಶದಲ್ಲಿ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರು ಶಿಕ್ಷಣ ದಾಸೋಹ ನೀಡುತ್ತಾ ಗಾಂಧೀಜಿಯವರ ಆದರ್ಶಕ್ಕೆ ಸಾಕ್ಷಿಯಾಗಿದ್ದರು" ಎಂದು ಹೇಳಿದರು.

ಈ ಸಂದರ್ಭದಲ್ಲಿ ಸಿದ್ಧಗಂಗಾ ಆಸ್ಪತ್ರೆಯ ಮುಖ್ಯಸ್ಥರಾದ ಡಾ. ಎಸ್. ಪರಮೇಶ್ ಅವರು ಮಾತನಾಡಿ "ಸೂಪರ್ ಸ್ಪೆಷಾಲಿಟಿ ಸೇವೆ ನೀಡುತ್ತಾ ಎನ್.ಎ.ಬಿ.ಹೆಚ್. ಮಾನ್ಯತೆ ಪಡೆದ ಉತ್ಕೃಷ್ಟ ಸೇವೆಯಲ್ಲಿ ರಾಜ್ಯದ ಪ್ರಮುಖ ಆಸ್ಪತ್ರೆಗಳ ಸಾಲಿನಲ್ಲಿ ಗುರುತಿಸಿಕೊಂಡಿರುವ ಸಿದ್ಧಗಂಗಾ ಆಸ್ಪತ್ರೆ ಪ್ರಸ್ತುತ ಮೆಡಿಕಲ್ ಕಾಲೇಜಿನ ಒಂದು ಜನರಲ್ ವಿಭಾಗ ತೆರೆದಿದ್ದು ಅತ್ಯಲ್ಪ ದರದಲ್ಲಿ ವಿಮಾ ಸೌಲಭ್ಯಗಳನ್ನು ಒಳಗೊಂಡು ರೋಗಿಗಳಿಗೆ ಆರ್ಥಿಕವಾಗಿ ಹೊರೆಯಾಗದಂತೆ ಚಿಕಿತ್ಸೆ ನೀಡುವ ಉದ್ದೇಶವನ್ನು ಹೊಂದಿದೆ" ಎಂದು ಹೇಳಿದರು.

ಈ ಸಂದರ್ಭದಲ್ಲಿ ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಟಿ.ಕೆ. ನಂಜುಂಡಪ್ಪ, ಸಂಸದರಾದ ಶ್ರೀ ಜಿ.ಎಸ್. ಬಸವರಾಜ್, ಮಾಜಿ ಸಚಿವ ಶ್ರೀ ಸೊಗಡು ಶಿವಣ್ಣ, ಸಿದ್ಧಗಂಗಾ ಮೆಡಿಕಲ್ ಕಾಲೇಜಿನ ಪ್ರಾಚಾರ್ಯರಾದ ಡಾ. ಶಾಲಿನಿ, ಶ್ರೀಮಠದ ಆಡಳಿತಾಧಿಕಾರಿ ಶ್ರೀ ಎಸ್. ವಿಶ್ವನಾಥಯ್ಯ, ಸಾರ್ವಜನಿಕ ಸಂಪರ್ಕಾಧಿಕಾರಿ ಶ್ರೀ ಕಾಂತರಾಜು ಹಾಗೂ ಆಸ್ಪತ್ರೆಯ ಸಿಬ್ಬಂದಿ ಉಪಸ್ಥಿತರಿದ್ದರು.

ಮನವಿ

# ಗ್ರಾಮಭಾರತ – ನಮ್ಮ ನಡೆ–ಹಳ್ಳಿಯ ಕಡೆ

– ಡಾ. ಗೊ.ರು. ಚನ್ನಬಸಪ್ಪ *

"ಬಿರು ಬಿಸಿಲಿನಲ್ಲಿ ಬೆನ್ನು ಬಾಗಿಸಿ ದುಡಿಯುವ ಹಳ್ಳಿಗರೊಡನೆ ನಾವು ಗುರುತಿಸಿಕೊಳ್ಳಬೇಕು. ಆಗ ಮಾತ್ರ ನಾವು ನಿಜವಾದ ಜನಪ್ರತಿನಿಧಿಗಳೆನಿಸಿಕೊಳ್ಳುತ್ತೇವೆ". – ಮಹಾತ್ಮ ಗಾಂಧಿ



"ಭಾರತ ಹಳ್ಳಿಗಳ ದೇಶ. ಹಳ್ಳಿಗಳೇ ಭಾರತದ ಬೆನ್ನೆಲುಬು" ಎಂದು ಹೇಳುತ್ತಿದ್ದ ಮಹಾತ್ಮ ಗಾಂಧೀಜಿ ಅವರ ಮಾತನ್ನು ಸಾಮಾನ್ಯವಾಗಿ ಎಲ್ಲರೂ ಬಳಸುತ್ತಾರೆ. ಗಾಂಧೀಜಿ ಅವರಂತೂ 'ಗ್ರಾಮ ಭಾರತ'ದ ಕನಸನ್ನೇ ಕಾಣುತ್ತಿದ್ದರು. ಆದರೆ, ನಮಗೆ ಸ್ವಾತಂತ್ರ್ಯ ಬಂದ ನಂತರ, ನಮ್ಮ ಸರ್ಕಾರಗಳು **'ನಗರ ಭಾರತ'** ನಿರ್ಮಾಣಕ್ಕೆ ಹೆಚ್ಚು ಒತ್ತು ಕೊಟ್ಟಿರುವಂತೆ ಕಾಣುತ್ತದೆ.

ಗ್ರಾಮೀಣ ಅಭಿವೃದ್ಧಿಗಾಗಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಅನೇಕ ಯೋಜನೆಗಳನ್ನು ಜಾರಿಗೊಳಿಸಿದ್ದರೂ, ಸ್ಥಳೀಯ ವ್ಯವಸ್ಥೆಯೂ ಸೇರಿದಂತೆ ನಾನಾ ಕಾರಣಗಳಿಂದ ಆ ಯೋಜನೆಯು ನಿರೀಕ್ಷಿತ ಫಲ ನೀಡಿಲ್ಲವೆಂಬುದನ್ನು ಅಲ್ಲಗಳೆಯಲಾಗುವುದಿಲ್ಲ. ಏನಿದ್ದರೂ, ಸರ್ಕಾರಿ ಯೋಜನೆಗಳು ಪರಿಣಾಮಕಾರಿ ಫಲ ನೀಡುವಂತಾಗಲು ಗ್ರಾಮೀಣ ಜನಜಾಗೃತಿ ಮತ್ತು ಕೆಲವು ಪೂರಕ ಪ್ರಯತ್ನಗಳ ಅಗತ್ಯವಿದೆ; ಅವಕಾಶವೂ ಇದೆ.

ನಮಗೆಲ್ಲ ತಿಳಿದಿರುವಂತೆ, ನಮ್ಮ ದೇಶದ ರಾಜಕೀಯವೂ ಸೇರಿದಂತೆ ನಾನಾ ಕ್ಷೇತ್ರಗಳಲ್ಲಿ ವೃತ್ತಿನಿರತರಾಗಿರುವವರಲ್ಲಿ ಗ್ರಾಮೀಣ ಪ್ರದೇಶಗಳಿಂದ ಬಂದವರೇ ಹೆಚ್ಚಾಗಿದ್ದಾರೆ. ಅಂತಹ ಲಕ್ಷಾಂತರ ವೃತ್ತಿನಿರತರು ಮತ್ತು ವೃತ್ತಿ ನಿವೃತ್ತರು ನಗರ ಪ್ರದೇಶಗಳಲ್ಲಿ ಶಾಶ್ವತ ನಿವಾಸಿಗಳಾಗಿದ್ದಾರೆ. ಅವರೆಲ್ಲ ಬಹುಮಟ್ಟಿಗೆ ಆರ್ಥಿಕವಾಗಿಯೂ ಸುಸ್ಥಿತಿಯಲ್ಲಿದ್ದಾರೆ. ಅವರಲ್ಲಿ ಅನೇಕರಿಗೆ ತಾವು ಹುಟ್ಟಿದ ಹಳ್ಳಿಗಳಿಗೆ ಯಾವುದಾದರೂ ರೂಪದಲ್ಲಿ ನೆರವಾಗಬೇಕು ಎನ್ನುವ ಮನಸ್ಸೂ ಇದೆ.

ಅಂತಹ ನಗರವಾಸಿ ಗ್ರಾಮೀಣ ಬಂಧುಗಳ ನೆರವು ಅವರವರು ಹುಟ್ಟಿದ ಹಳ್ಳಿಗಳಿಗೆ ದೊರೆಯುವಂತೆ ಉತ್ತೇಜಿಸುವ ಆಶಯದಿಂದ ರಾಜ್ಯದ ರಾಜಧಾನಿ ಬೆಂಗಳೂರಿನಲ್ಲಿ **'ಗ್ರಾಮ ಭಾರತ ಪ್ರತಿಷ್ಠಾನ'** ಎಂಬ ಸ್ವಯಂ ಸೇವಾ ಸಂಸ್ಥೆಯನ್ನು ಸ್ಥಾಪಿಸಲಾಗಿದೆ. ಈ ಸಂಸ್ಥೆಯು ಗ್ರಾಮಗಳು ಮತ್ತು ನಗರಗಳ ನಡುವಿನ ಒಂದು ಸಂಬಂಧ ಸೇತುವಾಗಿ ಸೇವೆ ಸಲ್ಲಿಸಲು ನಿರ್ಧರಿಸಿದೆ.

ಹಳ್ಳಿಗಳಲ್ಲಿ ಹುಟ್ಟಿ ಬೆಳೆದು, ಉದ್ಯೋಗಾದಿ ಕಾರಣಗಳಿಂದ ನಗರಗಳನ್ನು ಸೇರಿ, ಅಲ್ಲೇ ನೆಲೆಸಿರುವವರ ಸಂಖ್ಯೆ ಲಕ್ಷಾಂತರವಿದೆ. ಅವರೆಲ್ಲ ಆಧುನಿಕ ಸೌಲಭ್ಯಗಳಿರುವ ನಗರಗಳಲ್ಲಿ ಉತ್ತಮ ಜೀವನ ನಡೆಸಲು ಸಾಧ್ಯವಾಗಿದೆ. ಆದರೆ ನಗರ ವಾಸಿಗಳಿಗೆ ಅನ್ನ ಬೆಳೆದುಕೊಡುವ, ಬಾಲ್ಯದಲ್ಲಿ ನಮ್ಮನ್ನು ಸಾಕಿ ಸಲಹಿದ ನಮ್ಮ ಹಳ್ಳಿಗಳು ಆಧುನಿಕ ಸೌಲಭ್ಯಗಳಿಂದ ವಂಚಿತವಾಗಿ ಇನ್ನೂ ಸೊರಗುತ್ತಿವೆ. ಈ ಕೊರತೆಯ ನಿವಾರಣೆಯಲ್ಲಿ ಹಳ್ಳಿಗಳಲ್ಲಿ ಹುಟ್ಟಿ ಈಗ ನಗರವಾಸಿಗಳಾಗಿರುವವರು ಕ್ರಿಯಾತ್ಮಕ ಪಾತ್ರವಹಿಸಲು ಅವಕಾಶವಿದೆ.

ಹಳ್ಳಿಗರ ಜೀವನ ಸುಧಾರಣೆಗೆ ಅಗತ್ಯವಾದ ಸೌಲಭ್ಯಗಳೆಂದರೆ– ಶುದ್ಧ ಕುಡಿಯುವ ನೀರು, ವಿದ್ಯುಚ್ಛಕ್ತಿ, ರಸ್ತೆ-ಚರಂಡಿ, ಶಾಲೆ, ಸಾಮೂಹಿಕ ಭವನ, ಕೆರೆ–ಕಟ್ಟೆ–ನಾಲೆಗಳು, ಅಂಚೆ ಸೌಲಭ್ಯ, ಬ್ಯಾಂಕಿನ ಸೌಲಭ್ಯ, ಮಾಹಿತಿ ವ್ಯವಸ್ಥೆ,

* ಗ್ರಾಮ ವಿಕಾಸ ಪ್ರತಿಷ್ಠಾನ, ನಂ. ೪೦೬, ಪ್ರಣಾಮ, 'ಎಫ್' ರಸ್ತೆ, ಐಡಿಯಲ್ ಹೋಮ್ಸ್ ಟೌನ್‌ಷಿಪ್, ರಾಜರಾಜೇಶ್ವರಿ ನಗರ, ಬೆಂಗಳೂರು–೫೬೦೦೯೮



ಆರೋಗ್ಯ ಸೇವೆ ಮೊದಲಾದವು. ಇವೆಲ್ಲ ಸರ್ಕಾರವೇ ನಿರ್ವಹಿಸಬೇಕಾದ ಕಾರ್ಯಗಳಾದರೂ, ಅದಕ್ಕೆ ಪೂರಕವಾಗಿ, ನಮ್ಮ ಹಳ್ಳಿಗಳ ಬಡವರಿಗೆ ಕೃಷಿ ಮತ್ತಿತರ ಕಸುಬುಗಳ ಉಪಕರಣಗಳು, ಓದು ಬಲ್ಲವರಿಗೆ ಪುಸ್ತಕಗಳು, ಪತ್ರಿಕೆಗಳು, ಹಳ್ಳಿಯ ಶಾಲೆಗೆ ಅಗತ್ಯವಾದ ಪಾಠ–ಪೀಠೋಪಕರಣಗಳು, ಜನಪದ ಕಲಾವಿದರಿಗೆ ವಾದ್ಯಗಳು, ಯುವಕರಿಗೆ ಕ್ರೀಡಾ ಸಾಧನಗಳು, ಅಗತ್ಯವಿರುವವರಿಗೆ ಕೈ ಬ್ಯಾಟರಿಗಳು, ಕನ್ನಡಕಗಳು, ಶ್ರವಣ ಸಾಧನಗಳು, ಪಾದರಕ್ಷೆಗಳು, ಔಷಧಗಳು, ಬೆಚ್ಚನೆಯ ಹೊದಿಕೆಗಳು, ಬಡಗಿ ಕಮ್ಮಾರ, ಕುಂಬಾರ – ಚಿನಿವಾರರಿಗೆ ಸಾಧನ ಸಲಕರಣೆಗಳು, ಸಂಚಾರಿ ದೂರವಾಣಿಗಳು, ಇತ್ಯಾದಿಗಳ ಕೊಡುಗೆಗಳೇ ಅಲ್ಲದೆ, ಬಯಲು ರಂಗ ಮಂದಿರ, ಗ್ರಂಥಾಲಯ, ಮಾಹಿತಿ ಕೇಂದ್ರಗಳಂತಹ ನಿರ್ಮಾಣಕ್ಕೆ, ಗ್ರಾಮೀಣ ವಿದ್ಯಾರ್ಥಿಗಳ ಉನ್ನತ ಶಿಕ್ಷಣಕ್ಕೆ, ಉದ್ಯೋಗಾವಕಾಶ ಕಲ್ಪಿಸಲಿಕ್ಕೆ, ವೈದ್ಯಕೀಯ ಚಿಕಿತ್ಸಾ ಶಿಬಿರಗಳನ್ನು ನಡೆಸಲಿಕ್ಕೆ, ಕಾಲ ಕಾಲಿಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಲಿಕ್ಕೆ, ವಿವಿಧ ಕ್ಷೇತ್ರದ ಪ್ರತಿಭಾವಂತರನ್ನು ಗುರುತಿಸಿ ಪ್ರಶಸ್ತಿ ಬಹುಮಾನಗಳನ್ನು ನೀಡಲಿಕ್ಕೆ, ಕೃಷಿ ಮತ್ತಿತರ ಕ್ಷೇತ್ರ ತಜ್ಞರ ನೆರವನ್ನು ಒದಗಿಸಲಿಕ್ಕೆ – ಹೀಗೆ ನಾನಾ ರೂಪಗಳಲ್ಲಿ ನಗರವಾಸಿ ಗ್ರಾಮೀಣ ಬಂಧುಗಳು ನೆರವಾಗಲು ಹೇರಳ ಅವಕಾಶವಿದೆ.

ಈಗ ನಗರವಾಸಿಗಳಾಗಿರುವ ಅನೇಕರ ತಂದೆ–ತಾಯಿಗಳು, ಅಣ್ಣ–ತಮ್ಮಂದಿರು, ನೆಂಟರಿಷ್ಟರು, ಆಪ್ತ ಸ್ನೇಹಿತರು ನಾನಾ ಕಾರಣಗಳಿಂದಾಗಿ ಹಳ್ಳಿಗಳಲ್ಲೇ ಇದ್ದಾರೆ. ನಾವು ಹಳ್ಳಿಗಳಿಗೆ ಯಾವುದಾದರೂ ರೂಪದಲ್ಲಿ ನೆರವಾದರೆ, ಸಹಜವಾಗಿಯೇ ಅವರು ಹೆಮ್ಮೆಪಡುತ್ತಾರೆ. ವಾಸ್ತವವಾಗಿ ನಗರ ನಿವಾಸಿಗಳಾದ ನಾವು ನಮ್ಮ ನಮ್ಮ ಹುಟ್ಟಿದ ಹಳ್ಳಿಗಳಿಗೆ ಸಲ್ಲಿಸಬೇಕಾದ ಋಣವೂ ಇದೆ.

ಈಗಾಗಲೇ ಹಾಗೆ ನಗರಗಳನ್ನು ಸೇರಿ ಉನ್ನತ ಸ್ಥಾನ–ಮಾನಗಳನ್ನು ಪಡೆದಿರುವ ಕೆಲವು ಗ್ರಾಮಾಭಿಮಾನಿಗಳು, ತಮ್ಮ ತಮ್ಮ ಜನ್ಮ ಗ್ರಾಮಗಳಿಗೆ ಶಾಲಾ ಕಟ್ಟಡ, ಸಾಮೂಹಿಕ ಭವನ, ಸಂರಕ್ಷಿತ ಕುಡಿಯಲು ನೀರಿನ ವ್ಯವಸ್ಥೆಯಂತಹ ಸೌಲಭ್ಯಗಳನ್ನು ಒದಗಿಸಲು ನೆರವಾಗಿರುವ ಸಾಕಷ್ಟು ನಿದರ್ಶನಗಳಿವೆ. ಅಂತಹ ವಿರಳಪ್ರ ಸೇವೆ ಒಂದು ಸಾಮೂಹಿಕ



ಚಳವಳಿಯಂತಾಗಿ, ಇಡೀ ನಮ್ಮ ಗ್ರಾಮೀಣ ಪ್ರದೇಶದ ಸುಧಾರಣೆಯಾಗಬೇಕೆಂಬುದು 'ಗ್ರಾಮ ಭಾರತ ಪ್ರತಿಷ್ಠಾನ'ದ ಮುಖ್ಯ ಧ್ಯೇಯೋದ್ದೇಶ.

ತಮ್ಮ ತಮ್ಮ ಜನ್ಮಸ್ಥಳಗಳಿಗೆ ನೆರವಾಗಬಲ್ಲ ನಗರವಾಸಿಗಳನ್ನು ಹಳ್ಳಿಗರ ಸಹಕಾರದಿಂದ ಗುರುತಿಸಿ, ಪಟ್ಟಿ ಮಾಡಿಟ್ಟುಕೊಂಡು, ಅಂಥವರು ಸಂದರ್ಭೋಚಿತವಾಗಿ ತಮ್ಮ ತಮ್ಮ ಹಳ್ಳಿಗಳಿಗೆ ಅಗತ್ಯವಾದ ಮಾರ್ಗದರ್ಶನ, ಹಣ ಅಥವಾ ವಸ್ತು ರೂಪದ ಕೊಡುಗೆ ಇತ್ಯಾದಿ ಯಾವುದಾದರೂ ರೂಪದಲ್ಲಿ ಸೇವೆ ಸಲ್ಲಿಸುವಂತೆ ಪ್ರತಿಷ್ಠಾನವು ಅವರನ್ನು ಸಂಪರ್ಕಿಸಿ ಮನವೊಲಿಸುವ ಕಾರ್ಯವನ್ನು ನಿರ್ವಹಿಸುತ್ತದೆ.

ಪ್ರತಿಷ್ಠಾನವು ಸರ್ಕಾರದ ನಿಯಮದ ಪ್ರಕಾರ ನೋಂದಾಯಿತ ವಿಶ್ವಸ್ಥ ಮಂಡಳಿಯಾಗಿದ್ದು, ಅಧಿಕೃತ ಕಾರ್ಯಸಮಿತಿಯ ಮೂಲಕ ತನ್ನ ಧ್ಯೇಯೋದ್ದೇಶದಂತೆ ಸೇವೆ ಸಲ್ಲಿಸುವ ಸಂಕಲ್ಪ ಮಾಡಿದೆ. ಗಾಂಧೀಜಿ ಪರಿಕಲ್ಪನೆಯ ಸ್ವಾಭಿಮಾನಿ ಮತ್ತು ಸ್ವಾವಲಂಬಿ ಗ್ರಾಮಭಾರತ ನಿರ್ಮಾಣ ಕಾರ್ಯದಲ್ಲಿ ಸರ್ಕಾರಿ ಯೋಜನೆಗಳಿಗೆ ಪೂರಕವಾಗಿ ನಗರವಾಸಿ ಗ್ರಾಮೀಣ ಬಂಧುಗಳು ನೆರವಾಗುವ ಒಂದು ವಿನಮ್ರ ಪ್ರಯತ್ನ 'ಗ್ರಾಮ ಭಾರತ ಪ್ರತಿಷ್ಠಾನ' ಬಹುಶಃ ಇಡೀ ಭಾರತದಲ್ಲೇ ಈ ಪ್ರಯತ್ನ ಪ್ರಥಮವಾಗಿದೆ.

ಕರ್ತವ್ಯ ರೂಪದ ಈ ಸೇವಾ ಕಾರ್ಯದಲ್ಲಿ ಪಾಲುಗೊಳ್ಳಲಿಚ್ಛಿಸುವವರು ಹೆಚ್ಚಿನ ವಿವರಗಳಿಗೆ ಪ್ರತಿಷ್ಠಾನದ ಕಾರ್ಯಾಲಯವನ್ನು ಸಂಪರ್ಕಿಸಬಹುದು. (ವಿಳಾಸ: ಗ್ರಾಮ ವಿಕಾಸ ಪ್ರತಿಷ್ಠಾನ, ನಂ. ೪೦೬, ಪ್ರಣಾಮ, 'ಎಫ್' ರಸ್ತೆ, ಐಡಿಯಲ್ ಹೋಮ್ಸ್ ಟೌನ್‌ಷಿಪ್, ರಾಜರಾಜೇಶ್ವರಿ ನಗರ, ಬೆಂಗಳೂರು–೫೬೦೦೯೮ ದೂರವಾಣಿ: ೯೮೬೬೨ ೨೦೩೯೬, ೯೮೮೬೪೦೬೩೨೧)

ಲೇಖನ

# ಸರ್ಪಭೂಷಣ ಶಿವಯೋಗಿ

– ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ *

(ಹಿಂದಿನ ಸಂಚಿಕೆಯಿಂದ)

೩

ಅನುಭಾವವನ್ನು ಕುರಿತು ಚನ್ನಬಸವಣ್ಣನವರು ಅತ್ಯಂತ ಸರಳವಾಗಿ ನಿರೂಪಿಸಿದ್ದು ಹೀಗೆ : 'ಅನುಭಾವ; ಅರಿಷಡ್ವರ್ಗಂಗಳ ಇಚ್ಛೆಗೆ ಹರಿಯದಿರಬಲ್ಲಡೆ !' ನಿಜ ಅನುಭಾವಿಯಾದವನು ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಈ ಆರು ಗುಣಗಳನ್ನು ಗೆದ್ದವನಾಗಿರಬೇಕು. ಆಗಲೇ ಆತನಿಗೆ ಅನುಭಾವದ ಸಿದ್ಧಿ!

ಸಪ್ಪಣ್ಣನವರ ಬದುಕನ್ನು ನೋಡುವಾಗ ಕೇವಲ ನಲವತ್ತನಾಲ್ಕು ವರ್ಷಗಳ ಬದುಕಿನಲ್ಲಿ ಅನುಭಾವದ ಬದುಕಿನ ಆರಂಭದಲ್ಲಿ ಕಂಡುಬರುವ ಕಾಳರಾತ್ರಿಯ ದಿನಗಳು ಅಷ್ಟಾಗಿ ಇದ್ದಂತೆ ತೋರುವುದಿಲ್ಲ. ಬಾಲ್ಯದಲ್ಲಿದ್ದ ತುಂಟಾಟ, ತಂದೆತಾಯಿಗಳ ಮಾತನ್ನು ಕೇಳದ ಹುಡುಗುತನ; ಓದಿನತ್ತ ಚಲಿಸದಿರುವ ಮನಸ್ಸು ಇವುಗಳೇ ಅವರ ಬದುಕಿನ ಕಾಳರಾತ್ರಿಯ ಕಾಲಕ್ಕೆ ಸಂಬಂಧಿಸಿದ ಸಂಗತಿಗಳು ಎಂದುಕೊಳ್ಳಬೇಕು.

ಆದರೆ ಒಮ್ಮೆ ಗುರುಗಳಾದ ಶ್ರೀ ಗುರುಸಿದ್ಧರ ವ್ಯಕ್ತಿತ್ವದ ಆಕರ್ಷಣೆಗೆ ಒಳಗಾಗಿ ಬಂದ ಸಪ್ಪಣ್ಣ ಬೇರೆಯೇ ವ್ಯಕ್ತಿಗಳಾದರು. ವ್ಯಾಪಾರಿಗಳ ಕುಟುಂಬದಲ್ಲಿ ಹುಟ್ಟಿದ ಸಪ್ಪಣ್ಣ ಕೂಡ ಒಂದು ರೀತಿಯ ದೊಡ್ಡ ವ್ಯಾಪಾರವನ್ನೇ ಮಾಡಿದರು. ಅದು ಶೂನ್ಯಸಂಪಾದನೆಯ ವ್ಯವಹಾರ.

ಅದರ ಮೊದಲ ಹೆಜ್ಜೆ ವೈರಾಗ್ಯದತ್ತ ತಿರುಗಿದ ಮನಸ್ಸು ಆಧ್ಯಾತ್ಮದ ಚಿಂತನೆಯಲ್ಲಿ ಲೋಕವನ್ನು ಮರೆಯದಂತಾದದ್ದು.

ಈಗ ಅವರ ಪ್ರವಚನ ಶಕ್ತಿಗೆ ಅನುಪಮವಾದ ತೇಜಸ್ಸು ಪ್ರಾಪ್ತವಾಗಿದ್ದಿತು. ಸೊಗಸಾದ ಶಾರೀರ, ಅಸಾಧಾರಣ ವಿದ್ವತ್ತು, ಶಿವ ಸಂತೃಪ್ತಿಯಿಂದ ಮಾಗಿದ ಮನಸ್ಸು, ಸಂಸ್ಕೃತ, ಕನ್ನಡ, ಸಾಹಿತ್ಯಗಳೆರಡರಲ್ಲಿಯೂ ಮಿಂದು ರಸಾರ್ದ್ರವಾಗಿದ್ದ ಪ್ರತಿಭೆಗಳ ಜೊತೆಗೆ ಸದಾ ಬದುಕಿನ ಶ್ರುತಿಯಂತಿದ್ದ ನಮ್ರತೆ ಅವರ ಪ್ರವಚನಗಳಿಗೆ ವಿಶೇಷವಾದ ಸತ್ವವನ್ನು ತುಂಬಿದ್ದಿತು. ಜೊತೆಗೆ ಮಠಕ್ಕೆ ಬರುತ್ತಿದ್ದ ಭಕ್ತಾದಿಗಳಿಗೆ ನೀಡುತ್ತಿದ್ದ ಅನುಭವಪೂರ್ಣ ಮಾರ್ಗದರ್ಶನ ಅವರನ್ನು ಅತ್ಯಂತ ಆತ್ಮೀಯವಾಗಿಸಿ ಬಿಟ್ಟಿತ್ತು. ಎಷ್ಟೋ ವೇಳೆ ಮಠದ ಅಧ್ಯಕ್ಷರಾದ ಪಟ್ಟ ಗುರುಸಿದ್ಧ ಸ್ವಾಮಿಗಳನ್ನು ಲಕ್ಷಿಸದೆ ಇವರತ್ತ ಭಕ್ತ ಸಮುದಾಯ ಆಕರ್ಷಿತವಾಗುತ್ತಿದ್ದುದು ಸಪ್ಪಣ್ಣನವರಿಗೆ ಅರಿವಾಗದೆ ಹೋಗಲಿಲ್ಲ. ತನ್ನಿಂದಾಗಿ ಮಠದ ಅಧ್ಯಕ್ಷರ ಗೌರವಕ್ಕೆ ಧಕ್ಕೆಯಾಗುವಂತಾದುದನ್ನು ಬಹುಬೇಗ ಅರ್ಥಮಾಡಿಕೊಂಡರು. ಇದಕ್ಕೆ ಪರಿಹಾರವೆಂದರೆ ತಾವು ಮಠವನ್ನು ಬಿಡಬೇಕು. ಹೀಗಾದಾಗಲಾದರೂ ಮಠದ ಅಧ್ಯಕ್ಷರಿಗೆ ಸೂಕ್ತವಾದ ಗೌರವ ಪ್ರಾಪ್ತವಾಗಬಹುದು ಎಂದೂ ಅವರಿಗನ್ನಿಸಿತು.

ಮಠದ ಭಕ್ತಾದಿಗಳಲ್ಲಿ ಒಬ್ಬರಾಗಿದ್ದ ಕೃಷ್ಣಪ್ಪನಾಯಕರು" ಸೂಕ್ಷ್ಮಗ್ರಾಹಿಗಳಾಗಿದ್ದರು. ಸಪ್ಪಣ್ಣನವರ ಮನಸ್ಸಿನ ಬಿಕ್ಕಟ್ಟನ್ನು ಅರ್ಥಮಾಡಿಕೊಂಡರು. ಸಪ್ಪಣ್ಣನವರು ಮಠವೊಂದನ್ನು ಕಟ್ಟಿಕೊಳ್ಳಲು ಅಗತ್ಯವಾದ ಜಮೀನನ್ನು ಹಿಂದಿನ ಕೆಂಪಾಬುಧಿ ಕೆರೆಯ ಪಕ್ಕದ ಪ್ರದೇಶದಲ್ಲಿದ್ದ ಜಮೀನನ್ನು ಸರ್ಕಾರದಿಂದ ಉಚಿತವಾಗಿಯೆ ಮಂಜೂರು ಮಾಡಿಸಿಕೊಟ್ಟರು.

ಮಠದ ನಿರ್ಮಾಣಕ್ಕೆ ಹಣ ಬೇಕಲ್ಲವೆ ! ಅದು ಕೂಡ ತೊಡಕಾಗಲಿಲ್ಲ. ಸಪ್ಪಣ್ಣನವರು ಪ್ರವಚನ ಮಾಡಿದ ಸಂದರ್ಭದಲ್ಲಿ ಹಣ ಸಂಗ್ರಹವಾಗಿದ್ದಿತಷ್ಟೆ – ಅತ್ತ ಸಪ್ಪಣ್ಣನವರ ಗಮನವಿದ್ದರೂ, ಪ್ರವಾಸ ಕಾಲದಲ್ಲಿ ಪ್ರವಚನ ರೊಟ್ಟಿ ವಿರೂಪಾಕ್ಷಪ್ಪನವರು ಅದನ್ನೆಲ್ಲ ಸಂಗ್ರಹಿಸಿ ಇಟ್ಟಿದ್ದು ಆ ಮೊತ್ತ ಹದಿನಾರು ರೂಪಾಯಿಗಳಾಗಿದ್ದಿತು." ಇನ್ನು ಕಟ್ಟಡ ನಿರ್ವಹಣೆಯ ಹೊಣೆ ಹೊರಲು ಸಪ್ಪಣ್ಣನವರ ಅಭಿಮಾನಿಗಳಲ್ಲಿ ಒಬ್ಬರಾಗಿದ್ದ ಅವರ ಶಿಷ್ಯರಲ್ಲಿ ಒಬ್ಬರಾಗಿದ್ದ ನಿಂತಿದ್ದರು. ಆಗಲೂ ಮಠದ ಕಟ್ಟಡದ ನಿರ್ಮಾಣದ ಹೊಣೆಯನ್ನು ಹೊತ್ತವರು ಫಾಲನೇತ್ರ ಸ್ವಾಮಿಗಳು ಸನ್ನದ್ಧರಾಗಿ ಆಗಲೂ ಮಠದ ಕಟ್ಟಡ ನಿರ್ಮಾಣದ ಮೇಲ್ವಿಚಾರಣೆ/ಉಸ್ತುವಾರಿ ಹೊತ್ತವರು ಫಾಲನೇತ್ರ ಸ್ವಾಮಿಗಳೇ ಎಂಬುದು. ಹೊತ್ತವರು ಫಾಲನೇತ್ರ ಸ್ವಾಮಿಗಳೇ ಹೊರತು

* ನಂ. ೨೦೩,'ಲಲಿತಕೃಪ' ೭ನೇ 'ಎ' ಮುಖ್ಯರಸ್ತೆ, ವಿಜಯನಗರ ಪೂರ್ವ, ಬೆಂಗಳೂರು-೫೬೦ ೦೪೦



ಸಪ್ಪಣ್ಣನವರಲ್ಲ ಎಂಬುದು ಗಮನಾರ್ಹ. ತನಗಾಗಿ ಒಂದು ಮಠ ಬೇಕೆನ್ನುವ ಬಯಕೆಯನ್ನು ಇಟ್ಟುಕೊಂಡಿರದ ನಿರ್ಲಿಪ್ತ-ನಿರಂಜನಮೂರ್ತಿ ಸಪ್ಪಣ್ಣನವರು. ಇನ್ನೂ ಆಶ್ಚರ್ಯದ ಸಂಗತಿಯೆಂದರೆ ಮಠದ ಗೋಪುರದ ನಿರ್ಮಾಣದ ಹಂತದಲ್ಲಿದ್ದಾಗ ಫಾಲನೇತ್ರ ಸ್ವಾಮಿಗಳು ಅದನ್ನು ಸಪ್ಪಣ್ಣನವರು ನೋಡಲೆಂದು ಬಯಸಿದ್ದು. ಹಾಗೆ ಒಂದು ಮಧ್ಯಾಹ್ನ ಅಲ್ಲಿ ಬಂದ ಸಪ್ಪಣ್ಣನವರಿಗೆ ಮಠದ ಗೋಪುರ ಸಿದ್ಧವಾಗುತ್ತಿರುವುದು ಕಂಡಾಗ ಉಂಟಾದ ಭಾವನೆ ಸಪ್ಪಣ್ಣನವರ ಇಚ್ಛಾಮರಣ ಸಂಕಲ್ಪವನ್ನು ಸೂಚಿಸುವಂಥದ್ದು. ಗೋಪುರ ನಿರ್ಮಾಣವನ್ನು ಕಂಡು ಸಪ್ಪಣ್ಣನವರು ಸಂತೋಷ ಪಡುತ್ತಾರೆಂದು ಭಾವಿಸಿದ್ದ ಫಾಲನೇತ್ರ ಸ್ವಾಮಿಗಳಿಗೆ ಆಶ್ಚರ್ಯವಾಯಿತು. ಸಪ್ಪಣ್ಣನವರ ಮಾತುಗಳನ್ನು ಕೇಳುತ್ತ:

"ಗೋಪುರವನ್ನೀಗ ನಿರ್ಮಾಣ ಮಾಡುವ ಉಸ್ತುವಾರಿ ಹೊತ್ತಿದ್ದೀರಲ್ಲವೆ? ಆದರೆ ಇನ್ನೊಂದು ವಾರದಲ್ಲಿ ಈ ಮಠದ ಕಳಶವೇ ಕಳಚಿ ಬೀಳಲಿದೆಯಲ್ಲವೆ?"

ನಿಜ, ಸಪ್ಪಣ್ಣನವರು ಯಾವ ಪೀಠಕ್ಕೇ ಆಗಲಿ ಕಳಶಪ್ರಾಯವಾಗುವಂಥ ವ್ಯಕ್ತಿತ್ವ ಉಳ್ಳವರು.

ಚಿತ್ರದುರ್ಗದ ಬೃಹನ್ಮಠದಲ್ಲಿ ಕಿರಿಯರಾಗಿದ್ದರೂ ತಮ್ಮ ಪ್ರವಚನ ಶಕ್ತಿ, ತರ್ಕದ ತೀಕ್ಷ್ಣತೆ, ವಿದ್ವತ್ತು ಮತ್ತು ವಿನಯಗಳಿಗೆ ಬೆರಗಾಗಿ ಅಲ್ಲಿಯೆ ನಿಲ್ಲಲು ಮಠದ ಹೆಚ್ಚಿನ ಅಭಿಮಾನಿಗಳು ಆಶಿಸಿದ್ದರು – ಅದನ್ನು ನಿರಾಕರಿಸಿ ಪರಿವ್ರಾಜಕರಾದರು.

ಹುಬ್ಬಳ್ಳಿಯ ಮೂರುಸಾವಿರ ಮಠದ ನೇತೃತ್ವ ವಹಿಸುವ ಆಹ್ವಾನ ಬಂದಾಗಲೂ ತನ್ನ ಗುರಿ ಬೇರೆಯೇ ಇದೆ ಎಂದು ಅದನ್ನೊಪ್ಪದೆ ಪರಿವ್ರಾಜಕತ್ವವನ್ನು ಮುಂದುವರೆಸಿದವರು. ಅಷ್ಟೇ ಅಲ್ಲ ಉರವಕೊಂಡದ ಗವಿಮಠದಲ್ಲಿ ತಮಗಾಗಿ ಪುಟ್ಟ ಮಠವೊಂದನ್ನು ನಿರ್ಮಿಸಿಕೊಟ್ಟರೂ ಅಲ್ಲಿ ಒಂದು ಪ್ರಾಚೀನ ಗ್ರಂಥಭಂಡಾರವನ್ನು ನಿರ್ಮಿಸಿ ಶ್ರೀಶೈಲದ ಯಾತ್ರೆಗೆ ಸನ್ನದ್ಧರಾದವರು.

ತಮ್ಮ ಬದುಕಿನ ದಿಕ್ಕನ್ನೇ ಬದಲಿಸಿ ದೊಡ್ಡ ಗುರಿಯೊಂದನ್ನು ತಮ್ಮ ಮುಂದಿರಿಸಿದ ಶ್ರೀ ಗುರುಸಿದ್ಧ ಸ್ವಾಮಿಗಳು ಲಿಂಗೈಕ್ಯರಾದಾಗಲೂ ಮಠದ ಅಧ್ಯಕ್ಷತೆಯನ್ನು ಒಪ್ಪಿಕೊಳ್ಳದೆ ಮಠದ ಮರಿಯಾಗಿದ್ದ ಚಿಕ್ಕ ಗುರುಸಿದ್ಧ ಸ್ವಾಮಿಗಳನ್ನು ಪಟ್ಟದಲ್ಲಿ ಕುಳ್ಳಿರಿಸಿ ತಾವು ಹುಬ್ಬದ ಸ್ವಾಮಿಗಳಲ್ಲೊಬ್ಬರಾಗಿ ಪ್ರವಚನಾಚಾರ್ಯರೂ ಗ್ರಂಥಕರ್ತರೂ ಆಗಿ ಉಳಿದದ್ದು – ತಾವು ಮಠದಲ್ಲಿ ಉಳಿದುಕೊಂಡ ಕಾರಣವಾಗಿ ಮಠಾಧ್ಯಕ್ಷರಾದ ಚಿಕ್ಕ ಗುರುಸಿದ್ಧಸ್ವಾಮಿಗಳ ಪ್ರಭಾವಕ್ಕೆ ಅಡ್ಡಿಯಾದಾಗ ಸಂಕೋಚಪಟ್ಟುಕೊಂಡು ಮಠಾಧ್ಯಕ್ಷರ ಗೌರವಕ್ಕೆ ಚ್ಯುತಿಯಾಗಬಾರದೆಂದು ಮಠದಿಂದಲೆ ದೂರ ಉಳಿಯುವ ತೀರ್ಮಾನ ತೆಗೆದುಕೊಂಡದ್ದು. ಹಾಗೆ ತೀರ್ಮಾನಿಸಿದಾಗ ಹೊಸ ಮಠವೊಂದರ ನಿರ್ಮಾಣಕ್ಕಾಗಿ ನಿವೇಶನ ಸರ್ಕಾರದಿಂದ ಮಂಜೂರಾಗಿ, ನಿರ್ಮಾಣಕ್ಕೆ ಅಗತ್ಯವಾದ ಹಣ ಕೂಡ ಒದಗಿಬಂದಾಗಲೂ ಮಠದ ನಿರ್ಮಾಣದಲ್ಲಿ ಆಸಕ್ತಿ ತಾಳದೆ ನಿರಂಜನರಾಗಿ ಉಳಿದದ್ದು ಸಪ್ಪಣ್ಣನವರ 'ಗುರು'ತ್ವಕ್ಕೆ ಸಾಕ್ಷಿ ಎನ್ನಬೇಕು. ಮಠದ ನಿರ್ಮಾಣ ಕಾರ್ಯದ ಪೂರ್ಣಗೊಳ್ಳುವ ಹಂತದಲ್ಲಿಯೂ ಮಠದ ಬಗೆಗೆ ಸಪ್ಪಣ್ಣನವರು ತಾಳಿದ ನಿರ್ಲಿಪ್ತ ಮನೋಭಾವ ಅವರ ವ್ಯಕ್ತಿತ್ವಕ್ಕಿಟ್ಟ ಕಳಶ ಎನ್ನಬೇಕು.

ಈ ಎಲ್ಲ ಘಟನೆಗಳ ಹಿಂದೆ ವ್ಯವಹಾರಸ್ಥ ಕುಟುಂಬದಿಂದ ಬಂದ ತುಂಟ ಹುಡುಗನೊಬ್ಬ ಗುರುಕೃಪಾಪಾತ್ರನಾಗಿ ವಿಷಯಾಸಕ್ತಿಯನ್ನು ತ್ಯಜಿಸಿ ಸರ್ವಸಂಗ ಪರಿತ್ಯಾಗಿಯಾದುದನ್ನು ಗಮನಿಸಿದಾಗ ಸಪ್ಪಣ್ಣನವರು ತಾವರೆಯ ಎಲೆಯ ಮೇಲಿನ ಜಲಬಿಂದು ವಿನಂತೆ ಅನ್ನಿಸುತ್ತದೆ.

ಅವರ ಬದುಕಿನ ಈ ವಿಶಿಷ್ಟ ರೀತಿಯನ್ನು ಕಂಡವರಿಗೆ ಸಪ್ಪಣ್ಣವರ ಬದುಕು ಒಂದು ಪವಾಡದಂತೆ ಕಾಣಿಸಿದರೆ ಆಶ್ಚರ್ಯವಾಗದು, ಆದ್ದರಿಂದಲೆ ಅವರ ಬದುಕಿನ ಸುತ್ತ ಹಲವು ಘಟನೆಗಳು-ಐತಿಹ್ಯಗಳು-ಸಹಜವಾಗಿಯೇ ಬೆಳೆದುಕೊಂಡಿವೆ. ಮೊದಲನೆಯದು ಅವರ ಬಾಲ್ಯಕ್ಕೆ ಸಂಬಂಧಿಸಿದುದು ಸಪ್ಪಣ್ಣನವರು ಮಗುವಾಗಿದ್ದಾಗ ನಡೆದ ಘಟನೆಯೆನ್ನುತ್ತಾರೆ. ಮಠದ ಗುರುಗಳಾದ ಶ್ರೀಗುರುಸಿದ್ಧ ಸ್ವಾಮಿಗಳು ಪ್ರವಚನ ಮಾಡುತ್ತಿದ್ದಾಗ ಅದರಲ್ಲಿ ಮುಳುಗಿಹೋಗಿದ್ದ ಸಪ್ಪಣ್ಣನ ಮಾತಾಪಿತೃಗಳಿಗೆ ತಮ್ಮ ಕೂಸು ತಮ್ಮನ್ನು ಬಿಟ್ಟು ಹೊರಗೆ ಹೋಗಿರುವುದು ಅರಿವಾದಾಗ ಮಠದ ಪಕ್ಕದ ಪೊದೆಯ ಬಳಿ ಸಪ್ಪಣ್ಣ ಆಡವಾಡುತ್ತಿದ್ದುದನ್ನು ಕಂಡು ಆಶ್ಚರ್ಯವಾಯಿತಂತೆ. ಏಕೆಂದರೆ ಆತನ ಕೊರಳಿಗೆ ನಾಗಸರ್ಪ ಸುತ್ತಿಕೊಂಡು ಹೆಡೆಯಾಡಿಸುತ್ತಿತ್ತಂತೆ. ಆ ಕಾರಣವಾಗಿಯೇ ಆ ಕೂಸಿಗೆ ಸರ್ಪಭೂಷಣ ಎಂದು ಹೆಸರಾಯಿತಂತೆ. ಅದರ ಹ್ರಸ್ವರೂಪವೇ ಸಪ್ಪಣ್ಣ ಅಂತೆ.

ಎರಡನೆಯದು ಸಪ್ಪಣ್ಣನವರ ಇಷ್ಟಲಿಂಗಾರ್ಚನೆಗೆ ಸಂಬಂಧಿಸಿದೆನ್ನುತ್ತಾರೆ. ಸಪ್ಪಣ್ಣನವರ ಇಷ್ಟಲಿಂಗಪೂಜೆ ಹಾಗೂ ನಿಷ್ಠೆ ಎಷ್ಟು ಮಹತ್ವದ್ದಾಗಿದ್ದಿತೆಂದರೆ ಅದನ್ನು ಕೆಲವರು ಕುಹಕಿಗಳು ಪರೀಕ್ಷಿಸಿ ನೋಡಬೇಕೆಂದು ಯೋಚಿಸಿದರಂತೆ. ಒಬ್ಬ ಕುಹಕಿ ಅವರು ಮಲಗಿದ್ದಾಗ ಇಷ್ಟಲಿಂಗವನ್ನು ಅಪಹರಿಸಿದ್ದಾಗಿಯೂ ಆಗ ಸಪ್ಪಣ್ಣನವರ ಪ್ರಾಣವೂ ಹೋಯಿತೆಂದೂ ಗಾಬರಿಗೊಂಡ ಕುಹಕಿಗಳು ಇಷ್ಟಲಿಂಗವನ್ನು ಮತ್ತೆ ಧಾರಣ ಮಾಡಿಸಿದಾಗ ಸಪ್ಪಣ್ಣನವರ ಪ್ರಾಣ ಹಿಂದಿರುಗಿತೆಂದೂ ಹೇಳುತ್ತಾರೆ.

ಮೂರನೆಯದಾಗಿ ಸಪ್ಪಣ್ಣನವರು ಇಚ್ಛಾಮರಣಿಗಳೆಂದು ಹೇಳುವುದು. ಸಪ್ಪಣ್ಣನವರಿಗಾಗಿ ಮಠದ ನಿರ್ವಹಣೆಯ ಪೂರ್ಣ ಜವಾಬ್ದಾರಿಯನ್ನು ವಹಿಸಿಕೊಂಡ ಫಾಲಲೋಚನ ಸ್ವಾಮಿಗಳು ಮಠದ ಗೋಪುರದ ಕಾರ್ಯ ಮುಗಿಯುವ ಹಂತಕ್ಕೆ ಬಂದಾಗ ಇದನ್ನು ಗುರುಗಳಿಗೆ ತೋರಿಸಿ ಸಂತೋಷಪಡಬೇಕೆಂದು ಬಯಸಿ ಸಪ್ಪಣ್ಣನವರನ್ನು ಆಹ್ವಾನಿಸಿದಾಗ ಅವರು ಗೋಪುರ ನಿರ್ಮಾಣವನ್ನು ಕಂಡು ಮೆಚ್ಚಿದರಂತೆ. ಆದರೆ ಅವರಿಗರಿವಿಲ್ಲದಂತೆ "ಮಠದ ಕಳಶವೇ ಇನ್ನು ಕೆಲವು ದಿನಗಳಲ್ಲಿ ಕಳಚಿ ಬೀಳಲಿದೆಯಲ್ಲವೆ?" ಎಂಬ ನುಡಿಗಳು ಹೊರಬಿದ್ದುವಂತೆ !

ನಾಲ್ಕನೆಯದಾಗಿ ಸಪ್ಪಣ್ಣನವರು ಲಿಂಗೈಕ್ಯರಾದುದನ್ನು ಅದೇ ಸಮಯದಲ್ಲಿ ಇಷ್ಟಲಿಂಗಾರ್ಚನಾನಂದದಲ್ಲಿ ಮುಳುಗಿದ್ದ ಮರಳೆ ಗವಿಮಠದ ಹುಚ್ಚಪ್ಪ ಸ್ವಾಮಿಗಳು ತಮ್ಮ ಇಷ್ಟಲಿಂಗದಲ್ಲಿ ಸಪ್ಪಣ್ಣನವರು ವಿಮಾನಾರೂಢನಾಗಿ ಕೈಲಾಸಕ್ಕೆ ಹೋಗುತ್ತಿರುವುದಾಗಿ ಕಾಣಿಸಿದರಂತೆ, ಧನ್ಯ ಸಪ್ಪಣ್ಣ ಎಂದು ಗುರುಗಳು ಉದ್ಧರಿಸಿದ್ದನ್ನು ಕೇಳಿಸಿಕೊಂಡು ರೊಟ್ಟಿ ರುದ್ರಪ್ಪನವರು ಮತ್ತು ಕೆಂಗೇರಿ ಪಟ್ಟಿನ ಮಲ್ಲಿಕಾರ್ಜುನಪ್ಪಗಳು ಬೆಂಗಳೂರಿಗೆ ಧಾವಿಸಿ ಬಂದು ನೋಡಿದರೆ ಸಪ್ಪಣ್ಣನವರು ಲಿಂಗೈಕ್ಯರಾಗಿದ್ದರಂತೆ.

ಸಪ್ಪಣ್ಣ, ಸರ್ಪಭೂಷಣ, ಸಪ್ಪಣಾರ್ಯ, ಸರ್ಪ ಭೂಷಣ ಸ್ವಾಮಿ ಎಂದೆಲ್ಲ ಖ್ಯಾತರಾಗಿದ್ದ ಸರ್ಪಭೂಷಣರ ಬದುಕು ಅನುಭಾವದ ಬದುಕು, ಕೊನೆಗಾದರು ಅವರು ಮಠಾಧ್ಯಕ್ಷರಾಗಿ ಕುಳಿತರೆ ಎಂದರೆ – ಇಲ್ಲ–ಅಲಕ್ ನಿರಂಜನರಾಗಿ ಲಿಂಗೈಕ್ಯರಾದವರು. ಅವರ ಬದುಕೇ ಒಂದು ಪವಾಡ. ಅಂಥ ಪವಾಡದ ಬದುಕಿನ ಹಾದಿಯನ್ನು ಕುರಿತು ನಮಗೆ ದೊರೆಯುವುದು ಅವರ ತಂದೆತಾಯಿಗಳ ಹೆಸರು. ಮತ್ತು ಅವರು ಜನಿಸಿದ್ದು ಬೆಂಗಳೂರಿನಲ್ಲಿ – ೧೭೯೫ನೇ ಇಸವಿಯಲ್ಲಿ, ಅವರು ಲಿಂಗೈಕ್ಯರಾದದ್ದು ೧೮೩೯ರಲ್ಲಿ. ಅಲ್ಲಮನನ್ನು ಕುರಿತ "ನಿಂದರೆ ನೆಳಲಿಲ್ಲ – ನಡೆದರೆ ಹೆಜ್ಜೆಯ ಗುರುತಿಲ್ಲ" ಎಂದು ಉದ್ಧರಿಸುತ್ತಾರೆ – ಅನುಭಾವಿಗಳ ಬದುಕೇ ಹಾಗೆ. ಲೋಕದ ದೃಷ್ಟಿಗೆ ಅದು ಅಷ್ಟು ಢಾಳಾಗಿ ಕಾಣುವಂಥದ್ದಲ್ಲ. ಬದುಕಿನ ಅವಧಿ ಕೇವಲ ನಲವತ್ತನಾಲ್ಕು ವರ್ಷಗಳು. ಅವುಗಳಲ್ಲಿ ಹನ್ನೆರಡು ವರ್ಷಗಳಷ್ಟು ಸುದೀರ್ಘ ಅವಧಿಯಲ್ಲಿ ಪರಿವ್ರಾಜಕರಾಗಿದ್ದವರು. ಇನ್ನುಳಿದ ವೇಳೆ ಇಷ್ಟಲಿಂಗಪೂಜೆ, ಅಧ್ಯಯನ, ಪ್ರವಚನಗಳಲ್ಲಿ ಮುಳುಗಿದವರು.

೪

ಇಂಥ ಅರ್ಪಿತ ಬದುಕಾದುದರಿಂದಲೇ ಅವರು ತಮ್ಮ ವಿರಾಮ ಕಾಲದಲ್ಲಿ ಪ್ರವಚನವನ್ನು ಅದಕ್ಕೆ ಪೂರಕವಾಗಿ ಕೃತಿಗಳ ರಚನೆಯನ್ನು ಮಾಡಿದವರು.

ಬಹುಶಃ ಅವರ ಆರಂಭದ ಕೃತಿ ಭುಜಂಗಮಾಲಾ ಶಿವಸಂಕೀರ್ಥನಮ್ – ಇಲ್ಲಿನ ಮೂವತ್ತೊಂದು ವೃತ್ತಗಳೂ ಗೇಯತೆಗೆ ಅನುಕೂಲವಾಗಿರುವುದು ಎಷ್ಟು ಮುಖ್ಯವೋ ಅಷ್ಟೇ ಮುಖ್ಯ ಇವುಗಳನ್ನು ಸಪ್ಪಣ್ಣನವರು ಕೃತಿ ರೂಪಕ್ಕಿಳಿಸಿರಲಿಲ್ಲವೆಂಬುದು. ಬಹುಶಃ ತಮ್ಮ ಇಷ್ಟಲಿಂಗಾರ್ಚನಾ ಸಮಯದಲ್ಲಿ ತನ್ಮಯತೆಯಿಂದ ಇವುಗಳನ್ನು ಹಾಡಿಕೊಳ್ಳುತ್ತಿದ್ದರೆಂದು ಕಾಣುತ್ತದೆ. ಸಂಸ್ಕೃತವನ್ನು ಬಲ್ಲ ಶಿಷ್ಯರಾದ ಲಿಂಗೈಕ್ಯ ಕಂಬಿ ಸಿದ್ಧರಾಮಣ್ಣನವರು ನೆನಪಿನಿಂದ ಇವುಗಳನ್ನು ಬರೆದಿಟ್ಟುಕೊಂಡಿದ್ದು ಸಪ್ಪಣ್ಣನವರು ಲಿಂಗೈಕ್ಯರಾದ ಮೇಲೆ ವಿದ್ವಾನ್ ಬಸವರಾಜಯ್ಯನವರಿಗೆ ಇವುಗಳನ್ನು ಮುದ್ರಿಸಲು ಕಳುಹಿಸಿಕೊಟ್ಟರೆಂದು ತಿಳಿಯಬರುತ್ತದೆ. ಆ ಕಾರಣವಾಗಿಯೇ ಹಲವಾರು ವ್ಯಾಕರಣ ದೋಷಗಳು ಇಲ್ಲಿನ ರಚನೆಗಳಲ್ಲಿದೆ. ಆದರೆ ಈ ಶಿವಸಂಕೀರ್ತನೆಗಳನ್ನು ಸಪ್ಪಣ್ಣನವರು ಬರೆದಿಲ್ಲದಿರುವುದು ಇನ್ನೊಂದು ರೀತಿಯಲ್ಲಿ ಮಹತ್ವದ್ದು – ಅಂದರೆ ಅವರಿಗೆ ಕೃತಿಕಾರನೆನಿಸಿಕೊಳ್ಳುವ ಮೋಹ ಕೂಡ ಇರಲಿಲ್ಲವೆಂಬುದು ತಿಳಿಯುತ್ತದೆ.

ಎರಡನೆಯ ಅವರ ಕೃತಿ ಜ್ಞಾನ ಶತಕ. ಸಂಸ್ಕೃತದಲ್ಲಿ ರಚಿತವಾಗಿರುವ ಈ ಕೃತಿ ಉಪನಿಷತ್ತು ಬ್ರಹ್ಮಸೂತ್ರ ಮತ್ತು ಗೀತಾದಿಗಳಿಗೆ ಪ್ರವೇಶ ಮಾಡುವವರಿಗಾಗಿ ರಚಿತವಾಗಿದೆಯೆಂದು ಸಪ್ಪಣ್ಣನವರೇ ಹೇಳಿದ್ದಾರೆ. ಇಲ್ಲಿ ವಿವಿಧ



ಜಾತಿಯ ಸಂಸ್ಕೃತ ವೃತ್ತಗಳ ರಚನೆಯಿದ್ದು ಸಪ್ಪಣ್ಣನವರ ಛಂದಸ್ಸಿನ ಜ್ಞಾನಕ್ಕೂ ಅಧ್ಯಾತ್ಮ ಚಿಂತನೆಯ ನಿದರ್ಶನವಾಗಿದೆ.

ಜ್ಞಾನಿಯ ಲಕ್ಷಣವನ್ನು ವರ್ಣಿಸುವ ರೀತಿಯಲ್ಲಿ ಕಾವ್ಯಮಯತೆಯೂ ಅನುಭಾವವೂ ಬಂದಿರುವುದನ್ನು ಕಾಣಬಹುದು. ಜ್ಞಾನಿಯ ಮನಸ್ಸು ಅಲೆಗಳಿಲ್ಲದ ಕಡಲು, ಮೋಡಗಳಿಲ್ಲದ ಆಕಾಶ ಇದ್ದಂತೆ ಎನ್ನುವ ವರ್ಣನೆ ಮನೋಹರವಾದದ್ದು. ಹಾಗೆಯೇ ಯೋಗಿಯಾಗಲಿ ಶ್ವಪಚನಾಗಲಿ ಎಲ್ಲರೂ ರಕ್ತಮಾಂಸ ಮಜ್ಜನಗಳಿಂದ ಕೂಡಿದವರೇ ಎಂದು ಹೇಳುವಾಗ ತಟ್ಟನೆ ನಮಗೆ ಬಸವಣ್ಣನವರ 'ಹೊಲೆಗಂಡಲ್ಲದೆ ಪಿಂಡದ ನೆಲಗಾಶ್ರಯವಿಲ್ಲ' ಎಂಬ ವಚನ ನೆನಪಾಗುತ್ತದೆ. ಇಂಥ ಚಿಂತನೆ ವಚನಕಾರರ ಚಿಂತನೆಗೆ ಸಮೀಪವಾದದ್ದು. ಏಕೆಂದರೆ ಮನುಷ್ಯರಲ್ಲಿ ತರತಮ ಭಾವನೆ ಹುಟ್ಟುವುದು ಅವರಲ್ಲಿರುವ ಚಿಂತನೆಯ ಕೊರತೆಯಿಂದಾಗಿ. ಆ ಕೊರತೆಯನ್ನು ನೀಗಿಕೊಂಡರಲ್ಲವೆ – ಅಲೆಗಳಿಲ್ಲದ ಕಡಲು; ಮೋಡಗಳಿಲ್ಲದ ಸುನೀಲಾಕಾಶದ ಅನುಭವ ಪ್ರಾಪ್ತವಾಗುವುದು? ವಾಸ್ತವವಾಗಿ ವೈದಿಕ ಪರಂಪರೆಯ ಚಿಂತನೆಯನ್ನೇ ಒಳಗೊಂಡ ಕೃತಿಯಲ್ಲಿ ಈ ಬಗೆಯ ಚಿಂತನೆ ನಡೆಯುವುದು ಉಲ್ಲಾಸದಾಯಕವಾದುದು.

ಅವರ ಮೂರನೆಯ ಕೃತಿ 'ಅಧ್ಯಾತ್ಮಿಕ ಸುಖ ಪ್ರಬೋಧ ಪ್ರಕರಣ'. ೧೨೭ ಹಾಡುಗಳನ್ನು ಒಳಗೊಂಡ ಐದು ಸ್ಥಲಗಳಲ್ಲಿರುವ ಈ ಕೃತಿ ಕಾವ್ಯ ಹಾಗೂ ದರ್ಶನಗಳೆರಡರ ದೃಷ್ಟಿಯಿಂದಲೂ ಗಮನಾರ್ಹವಾದದ್ದು.

ಈ ಕೃತಿಯು ನಿಜಗುಣ ಶಿವಯೋಗಿಗಳು ಆರಂಭಿಸಿದ ಕೈವಲ್ಯ ಪದ್ಧತಿ – ಪರಂಪರೆಯಲ್ಲಿ ಮೂಡಿಬಂದದ್ದಾಗಿದೆ. ಈ ಕೃತಿಯ ರಚನೆ ಬಗೆಗೆ ಇರುವ ಐತಿಹ್ಯ ಕೂಡ ಸಪ್ಪಣ್ಣನವರ ವಿನಯಶೀಲತೆಗೆ ದ್ಯೋತಕವಾಗಿದೆ.

ಇದನ್ನು ರಚಿಸುತ್ತಿರುವಾಗ ಪ್ರಭುಸ್ವಾಮಿಗಳು ಕುತೂಹಲಗೊಂಡು ಏನು ಮಾಡುತ್ತಿದ್ದೀರೆಂದು ಕೇಳಿದರಂತೆ. ಅದಕ್ಕೆ ಸಪ್ಪಣ್ಣನವರು ನಗುತ್ತ ಕೈವಲ್ಯ ಪದ್ಧತಿ ಎಂಬ ಕಲ್ಪವೃಕ್ಷದ ಸುತ್ತ ಬಳ್ಳಿಯೊಂದನ್ನು ಹಬ್ಬಿಸುತ್ತಿದ್ದೇನೆಂದು ಉತ್ತರಿಸಿದರಂತೆ. ನಿಜವಾಗಿಯೂ ಈ ಕೃತಿ ಕೈವಲ್ಯ ಕಲ್ಪವಲ್ಲರಿಯೇ ಆಗಿ ಮೆರೆದಿದೆ. ಶಿವಯೋಗಿಗಳಾದ ಸಪ್ಪಣ್ಣನವರ ಅನುಭಾವ ಇಲ್ಲಿನ ಅನೇಕ ಹಾಡುಗಳಲ್ಲಿ ಹೆಪ್ಪುಗಟ್ಟಿದೆ –

'ನನ್ನ ನಿಜವ ನಾನೇ ತಿಳಿಕೊಂಡೆನಲ್ಲಾ' ಎಂದು ಹಾಡಿದ ಸಪ್ಪಣ್ಣನವರು ಶ್ರೀಗಿರಿಯು ಶರೀರದೊಳಗುಂಟು! ಎಂಬುದನ್ನು ಅನುಭವಿಸಿದರು.

'ಶ್ರೀಗಿರಿ ಕ್ಷೇತ್ರಕಿಂದು ಹೋಗಿ ಯಾತ್ರೆಯ ಮಾಡಿಬಂದೆ' ಎಂದು ಹಾಡುವಾಗ ತನ್ನೊಳಗೇ ನಡೆದ ಅನುಭಾವಿಕ ಯಾತ್ರೆಯನ್ನವರು ವರ್ಣಿಸುತ್ತಾರೆ. ಕೊನೆಕೊನೆಗಂತು ಸಪ್ಪಣ್ಣನವರ ಬದುಕಿನ ಚಲನೆ –

**ತೇರು ಸಾಗಿತಮ್ಮ ನೋಡಿರೆ ದೇಹವೆಂಬ ತೇರು**
**ಸಾಗಿತಮ್ಮ ನೋಡಿರೆ**

ಎಂದು ಧನ್ಯತೆಯಿಂದ ಹಿಗ್ಗಿದುದುಂಟು. ಇಲ್ಲಿನ ಕೀರ್ತನೆಗಳಿಗೆ ರಾಗವನ್ನೂ ಸಪ್ಪಣ್ಣನವರು ನೀಡಿದ್ದಾರೆ. ಒಂದೆರಡು ಹಾಡುಗಳನ್ನು ಪಲ್ಲವಿ ಅನುಪಲ್ಲವಿಗಳಿಂದ ಕೂಡಿದ ಈ ರಚನೆಗಳು ನಿಜವಾಗಿಯೂ ಕೈವಲ್ಯವೆಂಬ ಕಲ್ಪವೃಕ್ಷಕ್ಕೆ ಹಬ್ಬಿದ ಬಳ್ಳಿಗಳೇ ಆಗಿವೆ. ಇಲ್ಲಿ ಕವಿಯು ಅನುಭಾವಿಯಾಗಿ ಅರಳುವುದನ್ನು ಅನೇಕ ಹಾಡುಗಳಲ್ಲಿ ಕಾಣಬಹುದು.

**ಅಡಿ ಟಿಪ್ಪಣಿಗಳು**

೪. ತೋಪಖಾನೆ ಕೃಷ್ಣಪ್ಪನವರು ಮುಮ್ಮಡಿ ಕೃಷ್ಣರಾಜೇಂದ್ರರಿಗೆ ಅಚ್ಚುಮೆಚ್ಚಿನವರಾಗಿದ್ದರು. ಇವರ ಹೆಸರನ್ನು ಕೃಷ್ಣಪ್ಪ ನಾಯಕರೆಂದೂ ಇವರು ದಿವಾನರಾಗಿದ್ದರೆಂದೂ ಮಲ್ಲಾಬಾದಿಯವರು ಹೇಳಿದರೆ; ಶಿವಮೂರ್ತಿ ಶಾಸ್ತ್ರಿಗಳು ಇವರು ಉನ್ನತಾಧಿಕಾರಿಗಳಾಗಿದ್ದರು ಎಂದು ಸೂಚಿಸುತ್ತಾರೆ.
೫. ಈ ಮೊತ್ತದ ಹಣವನ್ನು ಸಪ್ಪಣ್ಣನವರ ಭಕ್ತರೂ ಅಭಿಮಾನಿಯೂ ಆಗಿದ್ದ ಶ್ರೀಮಂತ ಮಹಿಳೆಯೊಬ್ಬಳು ಇರಿಸಿಕೊಂಡಿದ್ದಳೆಂದು ಇನ್ನೊಂದು ಅಭಿಪ್ರಾಯವಿದೆ. ಮೊತ್ತದ ಬಗ್ಗೆ ಚರ್ಚೆ ಇಲ್ಲ.

**ಆಧಾರ ಸೂಚಿ**

ಕೈವಲ್ಯ ಕಲ್ಪವಲ್ಲರಿ
ಜ್ಞಾನ ಶತಕಂ
ಭುಜಂಗಮಾಲಾ ಶಿವಸಂಕೀರ್ತನಮ್
ಸರ್ಪಭೂಷಣ ಶಿವಯೋಗಿಗಳ ಚರಿತ್ರೆ – ಮಲ್ಲಾಬಾದಿ ವೀರಭದ್ರಪ್ಪನವರು
ವೈರಾಗ್ಯದಲರು – ಬಾ.ಲೀ.ಮ.ಶಿ. ಗ್ರಂಥಮಾಲೆ
ವೀರಶೈವ ಮಹಾಪುರುಷರು – ಭಾಗ–೧, ಪಂಡಿತ ಶಿವಮೂರ್ತಿ ಶಾಸ್ತ್ರಿಗಳು
ವಿರತಿಯ ಸಿರಿ ಸಪ್ಪಣ್ಣನವರು – ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ

## ಶ್ರದ್ಧಾಂಜಲಿ

### ಹಿರಿಯ ವಿದ್ವಾಂಸ
### ಶ್ರೀ ಷಣ್ಮುಖಯ್ಯ ಅಕ್ಕೂರಮಠ ವಿಧಿವಶ



ಕನ್ನಡ-ಸಂಸ್ಕೃತ ಭಾಷೆಯಲ್ಲಿ ಅಪಾರವಾದ ಪಾಂಡಿತ್ಯವನ್ನು ಗಳಿಸಿದ್ದ ಹಿರಿಯ ವಿದ್ವಾಂಸ ಶ್ರೀ ಷಣ್ಮುಖಯ್ಯ ಅಕ್ಕೂರಮಠ ಅವರು ಅಕ್ಟೋಬರ್ ೧ ರಂದು ವಿಧಿವಶರಾದರು. ಅವರಿಗೆ ೮೨ ವರ್ಷವಾಗಿತ್ತು.

ಆಗಸ್ಟ್ ೨೩, ೧೯೩೯ ರಂದು ಗದಗ ಜಿಲ್ಲೆ, ಶಿರಹಟ್ಟಿ ತಾಲ್ಲೂಕು ಬೂದಿಹಾಳದಲ್ಲಿ ಶರಣ ದಂಪತಿಗಳಾದ ವೀರಪ್ಪಯ್ಯ ಅಕ್ಕೂರಮಠ ಮತ್ತು ಶ್ರೀಮತಿ ಬಸವಲಿಂಗಾಂಬೆ ಅವರ ಪುತ್ರರಾಗಿ ಜನಿಸಿದರು. ಪ್ರೌಢಶಾಲಾ ಶಿಕ್ಷಕರಾಗಿ ವೃತ್ತಿ ಜೀವನವನ್ನು ಪ್ರಾರಂಭಿಸಿದ ಅಕ್ಕೂರಮಠ ಅವರು ಸರ್ವೋದಯ ಕಾಲೇಜಿನಲ್ಲಿ ಉಪನ್ಯಾಸಕರಾಗಿಯೂ ಸೇವೆ ಸಲ್ಲಿಸಿದ್ದರು. ವೈಚಾರಿಕ ಸಾಹಿತ್ಯ ದಿಗ್ದರ್ಶನ, ಸೂಫಿ ಮತ್ತು ಶರಣರ ಅನುಭಾವ ಪಥ, ಸಂಸ್ಕೃತದಲ್ಲಿ ವೀರಶೈವ ಸಾಹಿತ್ಯ, ವಚನ ಸಾಹಿತ್ಯ ವಿವೇಚನೆ, ಭಾರತೀಯ ಭಕ್ತಿ ಚಳವಳಿಗಳು, ವೀರಶೈವ ಸಂಹಿತೆಯೂ ಸೇರಿದಂತೆ ಹಲವಾರು ಕೃತಿಗಳನ್ನು, ವಚನಕಾರರ ಪ್ರಮುಖ ಪರಿಕಲ್ಪನೆಗಳು, ಅಮರವಾಣಿ, ಇಷ್ಟಲಿಂಗ ಪೂಜಾವಿಧಿ, ನಿಜಗುಣ ಗೌರವ ಸಂಪುಟ, ಸರ್ಪಭೂಷಣ ಶಿವಯೋಗಿ ಮೊದಲಾದ ೧೩ ಗ್ರಂಥಗಳ ಸಂಪಾದಕರಾಗಿ ಸೇವೆ ಸಲ್ಲಿಸಿದ್ದಾರೆ. ಕೆಲವು ಕೃತಿಗಳನ್ನು ಅನುವಾದ ಮಾಡಿದ್ದಾರೆ. ಸಿದ್ಧಗಂಗಾ ಮಾಸಪತ್ರಿಕೆ ಹಾಗೂ ಶ್ರೀಮಠವು ಹೊರತಂದ ಸ್ಮರಣ ಸಂಪುಟಗಳಿಗೆ ಕೆಲವು ಅಮೂಲ್ಯ ಲೇಖನಗಳನ್ನು ನೀಡಿದ್ದರು.

ಶ್ರೀ ಷಣ್ಮುಖಯ್ಯ ಅಕ್ಕೂರಮಠ ಅವರು ಸಾಹಿತ್ಯ, ಸಾಹಿತ್ಯಶಾಸ್ತ್ರ, ಧರ್ಮ-ಧರ್ಮಶಾಸ್ತ್ರ, ಸಮಾಜಶಾಸ್ತ್ರ ಮೂರು ಕ್ಷೇತ್ರಗಳಲ್ಲಿ ತಲಸ್ಪರ್ಶಿ ಅಧ್ಯಯನ ಮಾಡಿ ಅವುಗಳಿಗೆ ಸಂಬಂಧಿಸಿದಂತೆ ಅನೇಕ ಮೌಲಿಕ ಕೃತಿಗಳನ್ನು ನೀಡಿ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ಅನೇಕ ಪ್ರತಿಷ್ಠಿತ ಪ್ರಶಸ್ತಿಗಳಿಗೆ ಭಾಜನರಾಗಿದ್ದರು.

ಮೃತರ ಆತ್ಮಕ್ಕೆ ಚಿರಶಾಂತಿಯನ್ನು, ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಅವರ ಕುಟುಂಬದವರಿಗೆ ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲಿ ಎಂದು 'ಸಿದ್ಧಗಂಗಾ' ಶರಣಾಂಜಲಿಯನ್ನು ಸಲ್ಲಿಸುತ್ತದೆ.

### ಶ್ರೀ ಬಿ.ಎಂ. ಶಿವರುದ್ರಯ್ಯ ನಿಧನ



ನಿವೃತ್ತ ದೈಹಿಕ ಶಿಕ್ಷಕರಾಗಿದ್ದ ಶ್ರೀ ಬಿ.ಎಂ. ಶಿವರುದ್ರಯ್ಯನವರು ಅಕ್ಟೋಬರ್ ೨೦ ರಂದು ವಿಧಿವಶರಾದರು. ಅವರಿಗೆ ೬೭ ವರ್ಷವಾಗಿತ್ತು. ರಾಮನಗರ ಜಿಲ್ಲೆ ಮಾಗಡಿ ತಾಲ್ಲೂಕಿನ ಕಂಚುಗಲ್ ಬಂಡೇಮಠದಲ್ಲಿ ಶರಣ ದಂಪತಿಗಳಾದ ಶ್ರೀ ಮುದ್ದವೀರಯ್ಯನವರ ಮತ್ತು ಶ್ರೀಮತಿ ನಂಜಮ್ಮ ಅವರ ಪುತ್ರರಾಗಿ ಜೂನ್ ೧, ೧೯೫೪ ರಲ್ಲಿ ಜನಿಸಿದರು. ಪ್ರಾಥಮಿಕ ಮತ್ತು ಪ್ರೌಢಶಾಲಾ ಶಿಕ್ಷಣವನ್ನು ಕಂಚುಗಲ್ ಬಂಡೇಮಠದಲ್ಲಿ ಪಡೆದರು. ಚಿತ್ರದುರ್ಗ ಜಿಲ್ಲೆ ಮಲ್ಲಾಡಿಹಳ್ಳಿ ಮಠದಲ್ಲಿ ಸಿ.ಪಿ.ಎಡ್. ಶಿಕ್ಷಣ ಮುಗಿಸಿ ಪರಮಪೂಜ್ಯ ಶ್ರೀ ಶ್ರೀಗಳವರ ಆಶೀರ್ವಾದಿಂದ ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ವಿವಿಧ ಪ್ರೌಢಶಾಲೆಗಳಲ್ಲಿ ೩೭ ವರ್ಷಗಳ ಕಾಲ ಸೇವೆ ಸಲ್ಲಿಸಿದ್ದರು.

ಶ್ರೀಯುತರು ತುಮಕೂರು ತಾಲ್ಲೂಕು ದೈಹಿಕ ಶಿಕ್ಷಣ ಸಂಘದ ಅಧ್ಯಕ್ಷರಾಗಿ ೧೦ ವರ್ಷಗಳ ಕಾಲ ಸೇವೆ ಸಲ್ಲಿಸಿದ್ದರು. ಶ್ರೀಮಠ ಹಾಗೂ ಪರಮಪೂಜ್ಯ ಶ್ರೀ ಶ್ರೀಗಳವರ ಬಗ್ಗೆ ವಿಶೇಷ ಭಕ್ತಿ, ಗೌರವ ಹೊಂದಿದ್ದರು. ಶ್ರೀಮಠದ ಜಾತ್ರಾ ಸಂದರ್ಭದಲ್ಲಿ ಮುಖ್ಯದ್ವಾರ ನಿರ್ವಹಣೆ ಸಂಚಾಲಕರಾಗಿ ಹಾಗೂ ಶ್ರೀಮಠದಲ್ಲಿ ನಡೆಯುವ ಕ್ರೀಡೋತ್ಸವಗಳಲ್ಲಿ ಉತ್ತಮ ಸಂಘಟಕರಾಗಿ ಅಮೂಲ್ಯ ಸೇವೆ ಸಲ್ಲಿಸಿದ್ದರು. ಬೆಂಗಳೂರಿನ ಶೇಷಾದ್ರಿಪುರಂ ಪದವಿಪೂರ್ವ ಕಾಲೇಜಿನಿಂದ 'ಅತ್ಯುತ್ತಮ ಶಿಕ್ಷಕ ಪ್ರಶಸ್ತಿ' ಹಾಗೂ ಬೆಂಗಳೂರಿನ ರೋಟರಿ ಮೆಟ್ರೋ ಸಂಸ್ಥೆಯಿಂದ 'ಉತ್ತಮ ಶಿಕ್ಷಕ ಪ್ರಶಸ್ತಿ' ಪಡೆದಿದ್ದರು.

ಶ್ರೀಯುತರ ಪತ್ನಿ, ಇಬ್ಬರು ಪುತ್ರರು, ಸಹೋದರರು, ಸಹೋದರಿಯರು ಸೇರಿದಂತೆ ಅಪಾರವಾದ ಬಂಧುಬಳಗವನ್ನು ಆಗಲಿದ್ದಾರೆ. ಮೃತರ ಆತ್ಮಕ್ಕೆ ಚಿರಶಾಂತಿಯನ್ನು ಹಾಗೂ ಅವರ ಅಗಲಿಕೆಯ ನೋವನ್ನು ಭರಿಸುವ ಶಕ್ತಿಯನ್ನು ಅವರ ಕುಟುಂಬದವರಿಗೆ ಬಸವಾದಿ ಶರಣರು ಹಾಗೂ ಶ್ರೀ ಸಿದ್ಧಗಂಗಾ ಗುರುಪರಂಪರೆ ಕರುಣಿಸಲಿ ಎಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.



## ನೆನಪು

# ಸೂರ್ಯನಂತೆ ಪ್ರಖರವಾಗಿ ಬೆಳಗಿ ಅಸ್ತಂಗತರಾದ "ಯುವರತ್ನ" ಶ್ರೀ ಪುನೀತ್ ರಾಜ್‌ಕುಮಾರ್



ಲಕ್ಷಾಂತರ ಅಭಿಮಾನಿಗಳ ಹೃದಯದಲ್ಲಿ ತಮ್ಮದೇ ಆದ ವಿಶಿಷ್ಟ ಸ್ಥಾನವನ್ನುಗಳಿಸಿದ್ದ ಕನ್ನಡದ ಕಣ್ಮಣಿ, ಬಹುಮುಖ ವ್ಯಕ್ತಿತ್ವವುಳ್ಳ ಪ್ರತಿಭಾವಂತ ಮೇರುನಟ, ಹಿನ್ನೆಲೆ ಗಾಯಕ, ನಿರ್ಮಾಪಕ, ಕಲಾದೇವಿಯ ವರಪುತ್ರ, ಮಾನವೀಯ ಮೌಲ್ಯಗಳ ಸಾಕಾರಮೂರ್ತಿ, ಆಧುನಿಕ ಕರ್ಣ, ಸಾತ್ವಿಕ ವ್ಯಕ್ತಿತ್ವವನ್ನು ಮೈಗೂಡಿಸಿಕೊಂಡಿದ್ದ ಶ್ರೀ ಪುನೀತ್ ರಾಜ್‌ಕುಮಾರ್ ಅವರು ತೀವ್ರ ಹೃದಯಾಘಾತದಿಂದ ಅಕ್ಟೋಬರ್ ೨೯ ರಂದು ವಿಧಿವಶ ರಾದರೆಂದು ತಿಳಿಸಲು 'ಸಿದ್ಧಗಂಗಾ' ವಿಷಾದಿಸುತ್ತದೆ. ಅವರಿಗೆ ೪೬ ವರ್ಷ ವಯಸ್ಸಾಗಿತ್ತು. ಅಭಿಮಾನಿಗಳಿಗೆ 'ಅಪ್ಪು' ಎಂದೇ ಜನಪ್ರಿಯರಾಗಿದ್ದರು.

ಜನನ : ೧೯೭೫, ಮಾರ್ಚ್ ೧೭ ರಂದು ಮೇರುನಟ, ನಟಸಾರ್ವಭೌಮ, ದಾದಾಫಾಲ್ಕೆ ವಿಶಿಷ್ಟ ಪ್ರಶಸ್ತಿ ಪುರಸ್ಕೃತರಾಗಿದ್ದ, ಕೋಟ್ಯಾಂತರ ಜನ ಅಭಿಮಾನಿಗಳ ಹೃದಯದಲ್ಲಿ ಶಾಶ್ವತವಾದ ಸ್ಥಾನಗಳಿಸಿರುವ ಡಾ. ರಾಜ್‌ಕುಮಾರ್ ಮತ್ತು ಶ್ರೀಮತಿ ಪಾರ್ವತಮ್ಮ ಅವರ ಕಿರಿಯ ಪುತ್ರರತ್ನವಾಗಿ ಜನಿಸಿದರು. ಶಾಲೆಯ ಮೆಟ್ಟಿಲ್ಲನ್ನತ್ತದೆ, ಮನೆಯಲ್ಲಿ ಮನೆಪಾಠದಿಂದ ಎಲ್ಲವನ್ನು ಕಲಿತರು. ಆರು ತಿಂಗಳ ಮಗುವಾಗಿದ್ದಾಗಲೇ 'ಪ್ರೇಮದ ಕಾಣಿಕೆ' ಚಿತ್ರದ ಮೂಲಕ ಚಿತ್ರರಂಗಕ್ಕೆ ಪಾದಾರ್ಪಣೆ ಮಾಡಿದ ಪ್ರತಿಭಾವಂತ.

ತಮ್ಮ ತಂದೆಯಂತೆಯೇ ಸರಳತೆ, ಸಜ್ಜನಿಕೆ, ವಿನಯವಂತಿಕೆ, ಕರುಣೆ, ದಯೆ, ಗುರು ಹಿರಿಯರಲ್ಲಿ ಭಕ್ತಿ ಮೊದಲಾದ ಗುಣಗಳನ್ನು ಮೈಗೂಡಿಸಿಕೊಂಡು, ಕನ್ನಡ ನಾಡು ನುಡಿಯ ಬಗ್ಗೆ ಅಪಾರವಾದ ಪ್ರೀತಿ, ಅಭಿಮಾನವನ್ನು ಬೆಳೆಸಿಕೊಂಡಿದ್ದ ಶ್ರೀ ಪುನೀತ್ ರಾಜ್‌ಕುಮಾರ್ ತಮ್ಮ ನಡೆ ನುಡಿಯ ಮೂಲಕ, ಅಭಿನಯದ ಮೂಲಕ ಯುವಕರಿಗೆ ಸ್ಫೂರ್ತಿಯಾಗಿದ್ದರು. ಮಾದರಿಯಾಗಿದ್ದರು. ಎಲ್ಲರೂ ಪ್ರೀತಿಸುವಂತೆ ಬದುಕಿದ್ದರು. ಬರೆಯುವಂತೆ ಬದುಕಿದ್ದರು.

ಲೋಕದ ದೃಷ್ಟಿಯಲ್ಲಿ ೪೬ ಸಾಯುವ ವಯಸ್ಸಲ್ಲ ನಿಜ! ವಿಧಿಲೀಲೆ! "ಜವರಾಯ ಬಂದರೆ ಬರಿಗೈಲಿ ಬರಲಿಲ್ಲ, ಕುಡುಗೋಲ ಹೆಗಲೇರಿಸಿಕೊಂಡು ಒಳ್ಳೊಳ್ಳೆ ಮರನ ಕಡಿಬಂದ" ಎಂಬ ಜನಪದ ತ್ರಿಪದಿಗಳ ಸೊಲ್ಲು ಇಂಥವರನ್ನು ಕುರಿತೇ ಹೇಳಿರುವಂತಿದೆ. ಹೌದು! ಜವರಾಯನಿಗೆ ಒಳ್ಳೊಳ್ಳೆ ಮರಗಳ ಮೇಲೆ ಏಕೆ ಈ ಕ್ರೂರ ದೃಷ್ಟಿ. ಅವನಿಗೆ ಈ ಮರವೇ ಬೇಕಾಯಿತೆ. ಬೇರೆ ಮರಗಳು ಕಣ್ಣಿಗೆ ಬೀಳಲಿಲ್ಲವೇ ಎಂಬ ಅಭಿಮಾನಿಗಳ ಮನದಾಳದ ಮಾತು ಪ್ರಶ್ನೆಯಾಗಿಯೇ ಉಳಿದಿದೆ. ವಿಧಿಯ ಮುಂದೆ ನಾವೆಲ್ಲರೂ ಶರಣಾಗಲೇಬೇಕು. ಆದರೆ ಹೀಗಾಗಬಾರದಾಗಿತ್ತು ಎಂಬ ನೋವು ಸದಾಕಾಲ ಕಾಡುತ್ತಲೇ ಇರುತ್ತದೆ.

**ಚಿತ್ರರಂಗ** : ಶ್ರೀ ಪುನೀತ್ ರಾಜ್‌ಕುಮಾರ್ ಅವರಿಗೆ 'ಅಭಿನಯ ಕಲೆ' ವಂಶಪಾರಂಪರ್ಯವಾಗಿ, ರಕ್ತಗತವಾಗಿ ಹರಿದುಬಂದಿತ್ತು. ಅವರ ಅಣ್ಣಂದಿರಾದ ಶ್ರೀ ಶಿವರಾಜ್‌ಕುಮಾರ್, ರಾಘವೇಂದ್ರ ರಾಜ್‌ಕುಮಾರ್ ಶ್ರೇಷ್ಠ ನಟರು. ಅಂತಹ ಪರಿಸರದಲ್ಲಿ ಬೆಳೆದ ಶ್ರೀ ಪುನೀತ್ ರಾಜ್‌ಕುಮಾರ್ ಅವರಿಗೆ ಅಭಿನಯ ಕಲೆ ಲೀಲಾ ಜಾಲವಾಗಿತ್ತು. ಬಹುತೇಕ ತಂದೆಯವರ ಗುಣಗಳನ್ನು ಮೈಗೂಡಿಸಿಕೊಂಡಿದ್ದ ಅವರಿಗೆ ಚಿತ್ರರಂಗ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಬಹು ಎತ್ತರಕ್ಕೆ ಬೆಳೆಯುವಂತೆ ಮಾಡಿತು. ಹಿರಿದಾದುದನ್ನು ಸಾಧಿಸಲು ಸಾಧ್ಯವಾಯಿತು. ಆಕಾಶದೆತ್ತರಕ್ಕೆ ಬೆಳೆದಿದ್ದರೂ ನಿಂತ ನೆಲವನ್ನು ಮರೆಯಲಿಲ್ಲ.

'ಬೆಟ್ಟದ ಹೂವು' ಚಿತ್ರದಲ್ಲಿ ಬಾಲನಟನೆಗಾಗಿ ಲೀಲಾಜಾಲವಾದ ಅಭಿನಯದ ಮೂಲಕ ರಾಷ್ಟ್ರೀಯ ಪ್ರಶಸ್ತಿಗೆ ಭಾಜನರಾದ ಹೆಗ್ಗಳಿಕೆ. ಅವರು ತಂದೆಯವರಾದ ಡಾ. ರಾಜ್‌ಕುಮಾರ್ ಅವರು ಅಭಿನಯಿಸಿದ ಚಿತ್ರಗಳಲ್ಲಿ ಸ್ನೇಹಿತನಾಗಿ, ಮಗನಾಗಿ ಅಭಿನಯಿಸಿದ್ದರು. 'ಸನಾದಿ ಅಪ್ಪಣ್ಣ', 'ವಸಂತಗೀತ', 'ಹೊಸಬೆಳಕು', 'ಚಲಿಸುವ ಮೋಡಗಳು', 'ಭಕ್ತ ಪ್ರಹ್ಲಾದ', 'ಎರಡು ನಕ್ಷತ್ರಗಳು', 'ಯಾರಿವನು', 'ಶಿವ ಮೆಚ್ಚಿದ ಕಣ್ಣಪ್ಪ' ಹೀಗೆ ಹಲವಾರು ಚಿತ್ರಗಳಲ್ಲಿ ಬಾಲನಟನಾಗಿ ತಮ್ಮ ಪ್ರೌಢಿಮೆಯನ್ನು ಮೆರೆದಿದ್ದರು.



ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಂದ "ದೊಡ್ಮನೆ ಹುಡುಗ" ಆಡಿಯೋ ಲೋಕಾರ್ಪಣೆ

ಇಪ್ಪತ್ತು ಚಿತ್ರಗಳಿಗೂ ಹೆಚ್ಚು ಚಿತ್ರಗಳಲ್ಲಿ ನಾಯಕ ನಟನಾಗಿ ಮನೋಜ್ಞವಾಗಿ ನಟಿಸಿ ಚಿತ್ರ ಪ್ರೇಮಿಗಳ ಮನಸನ್ನು ಸೂರೆಗೊಂಡಿದ್ದರು. ಲಕ್ಷಾಂತರ ಅಭಿಮಾನಿಗಳ ಹೃದಯಕ್ಕೆ ಲಗ್ಗೆ ಹಾಕಿದ್ದರು. ಅವರು ನಟಿಸಿದ ಎಲ್ಲ ಚಿತ್ರಗಳೂ ಯಶಸ್ಸಿನ ಉತ್ತುಂಗ ಶಿಖರಕ್ಕೇರಿದ್ದವು. ಅವರ ಬಹುತೇಕ ಚಿತ್ರಗಳು ಮನರಂಜನೆಯ ಜೊತೆಗೆ ಸಾಮಾಜಿಕ ಕಳಕಳಿಯನ್ನು ಹೊಂದಿದವರಾಗಿದ್ದರು. ಕುಟುಂಬ ಸಮೇತ ಕುಳಿತು ನೋಡುವ ಚಿತ್ರಗಳಾಗಿದ್ದವು. ಸಮಾಜಕ್ಕೆ ಒಂದು ಉತ್ತಮ ಸಂದೇಶವನ್ನು ನೀಡುವ ಚಿತ್ರಗಳಾಗಿದ್ದವು. ಅವರೊಬ್ಬ ಶ್ರೇಷ್ಠ ನಟರಾಗಿದ್ದರು. 'ಅಹಂ' ಅನ್ನು ಹತ್ತಿರ ಸುಳಿಯಲು ಬಿಡದ ಘನ ವ್ಯಕ್ತಿತ್ವವನ್ನು ಹೊಂದಿದ್ದರು.

ಶ್ರೀ ಪುನೀತ್ ರಾಜ್‌ಕುಮಾರ್ ಅವರು ತಮ್ಮ ಮನೋಜ್ಞವಾದ ಅಭಿನಯದಿಂದ ಅಭಿನಯಕ್ಕಾಗಿ 'ಚಲಿಸುವ ಮೋಡಗಳು' ಹಾಗೂ 'ಎರಡು ನಕ್ಷತ್ರಗಳು' ಚಿತ್ರಗಳ ಬಾಲ ಕಲಾವಿದರಾಗಿ ಕರ್ನಾಟಕ ಸರ್ಕಾರದಿಂದ ಎರಡು ಪ್ರಶಸ್ತಿಗಳನ್ನು ಹಾಗೂ 'ಮಿಲನ' ಮತ್ತು 'ಜಾಕಿ' ಚಿತ್ರಗಳ ಅಭಿನಯಕ್ಕಾಗಿ ಅತ್ಯುತ್ತಮ ನಟ ಪ್ರಶಸ್ತಿಗಳನ್ನು ತಮ್ಮದಾಗಿಸಿ ಕೊಂಡಿದ್ದರು.

**ಸಾಮಾಜಿಕ ಕ್ಷೇತ್ರ :** ಶ್ರೀ ಪುನೀತ್ ರಾಜ್‌ಕುಮಾರ್ ಅವರು ತಮ್ಮ ಬದುಕನ್ನು ಚಲನಚಿತ್ರ ಕ್ಷೇತ್ರಕ್ಕಷ್ಟೇ ಸೀಮಿತಗೊಳಿಸಿಕೊಂಡಿರಲಿಲ್ಲ. ಸಾಮಾಜಿಕ ಕ್ಷೇತ್ರದಲ್ಲೂ ತೊಡಗಿಸಿಕೊಂಡಿದ್ದರು. ನಿಷ್ಠೆ, ಶ್ರದ್ಧೆ, ಕಳಕಳಿ, ಬದ್ಧತೆಯಿಂದ ಸಾಮಾಜಿಕ ಸೇವೆ ಮಾಡುತ್ತಿದ್ದರು. ಅವರೊಬ್ಬ ಸ್ಪಂದನಶೀಲ ಹೃದಯವಂತರಾಗಿದ್ದರು. ಕಷ್ಟದಲ್ಲಿದ್ದವರನ್ನು ಕಂಡರೆ ಕೂಡಲೇ ಸ್ಪಂದಿಸಿ ನೆರವು ನೀಡುತ್ತಿದ್ದರು. ಅವರ ಬದುಕಿಗೆ ಆಸರೆಯಾಗಿದ್ದರು. ಚಿತ್ರರಂಗವನ್ನು ಪ್ರವೇಶಿಸುವ ಹೊಸಬರಿಗೆ ಪ್ರೋತ್ಸಾಹ ಕೊಡುವ ಜೊತೆಗೆ ಮಾರ್ಗದರ್ಶನ ನೀಡಿ ಸರಿದಾರಿಯಲ್ಲಿ ಸಾಗುವಂತೆ ಮಾಡಿ, ಭವಿಷ್ಯದಲ್ಲಿ ಬೆಳಕು ಮೂಡುವಂತೆ ಮಾಡಿದ್ದರು.

'ಏನಗಿಂತ ಕಿರಿಯರಿಲ್ಲ' ಎಂಬ ಬಸವಣ್ಣನವರ ನುಡಿಯನ್ನು ಅರ್ಥಪೂರ್ಣವಾಗಿ ಜೀವನದಲ್ಲಿ ಅಳವಡಿಸಿ ಕೊಂಡು ವಿನಯವಂತಿಕೆಯಿಂದ ಅವರು ಸಮಾಜದಲ್ಲಿ ತ್ರಿವಿಕ್ರಮನಂತೆ ಬೆಳೆದರು. ಅವರು ಎತ್ತರಕ್ಕೆ ಬೆಳೆದಷ್ಟು ಅವರಲ್ಲಿನ ಸದ್ಗುಣಗಳು ಬೆಳೆಯುತ್ತಲೇ ಹೋದವು. ಹಾಗಾಗಿ ಎಲ್ಲಾ ವಯಸ್ಸಿನವರಿಗೂ ಬೇಕಾದವರಾಗಿ ಪ್ರೀತಿ ಗೌರವಕ್ಕೆ ಪಾತ್ರರಾಗಿದ್ದರು.

ಬಲಗೈಯಲ್ಲಿ ಕೊಟ್ಟಿದ್ದು ಎಡಗೈಗೆ ಗೊತ್ತಾಗಬಾರದೆಂಬ ಹಿರಿಯರ ಅನುಭವದ ನುಡಿಗಳನ್ನು ಅಕ್ಷರಶಃ ಪಾಲಿಸುತ್ತಿದ್ದ ಶ್ರೀ ಪುನೀತ್ ರಾಜ್‌ಕುಮಾರ್ ಅವರು ಕಷ್ಟದಲ್ಲಿರುವ ಅನೇಕ ಸಂಘ ಸಂಸ್ಥೆಗಳಿಗೆ ಉದಾರವಾದ ಆರ್ಥಿಕ ನೆರವನ್ನು ನೀಡಿ ಆ ಸಂಸ್ಥೆಗಳು ಪ್ರಗತಿಪಥದಲ್ಲಿ ನಡೆಯಲು ಸಹಾಯದ ಹಸ್ತವನ್ನು ನೀಡಿದ್ದರು. ಬಲ್ಲ ಮೂಲಗಳ ಪ್ರಕಾರ ೨೬ ಅನಾಥಾಶ್ರಮಗಳು, ೪೫ ಉಚಿತ ಶಾಲೆಗಳು, ೧೬ ವೃದ್ಧಾಶ್ರಮಗಳು, ೧೮೦೦ ಅನಾಥ ಮಕ್ಕಳಿಗೆ ಉಚಿತ ಶಿಕ್ಷಣದ ವ್ಯವಸ್ಥೆ ಹಾಗೂ ಮೈಸೂರಿನಲ್ಲಿ ಶಕ್ತಿಧಾಮ ಹೆಸರಿನಲ್ಲಿ ಹೆಣ್ಣು ಮಕ್ಕಳಿಗೆ ಶಿಕ್ಷಣ ವ್ಯವಸ್ಥೆ ಮಾಡಿದ್ದರು. ಆದರೆ ಎಲ್ಲಿಯೂ ತಾವು ಸಹಾಯ ಮಾಡುತ್ತಿರುವುದು ಬೆಳಕಿಗೆ ಬಾರದಂತೆ ಎಚ್ಚರಿಕೆ ವಹಿಸಿದ್ದು ಅವರ ದೊಡ್ಡ ಉದಾತ್ತ ಗುಣ. ಶ್ರೀ ಪುನೀತ್ ರಾಜ್‌ಕುಮಾರ್ ಅವರ ಗೆಳೆಯ, ತಮಿಳು ನಟ ಶ್ರೀ ವಿಶಾಲ ಅವರು ೧೮೦೦ ಮಕ್ಕಳ ಶಿಕ್ಷಣದ ಹೊಣೆಯನ್ನು ಹೊರುವುದಾಗಿ ಘೋಷಣೆ ಮಾಡುವುದರ ಮೂಲಕ ಶ್ರದ್ಧಾಂಜಲಿಯನ್ನು ಸಲ್ಲಿಸಿ ಇತರರಿಗೆ ಮಾದರಿಯಾಗಿದ್ದಾರೆ.

ಶ್ರೀ ಪುನೀತ್ ರಾಜ್‌ಕುಮಾರ್ ಅವರು ಅನೇಕ ಸಂಘ ಸಂಸ್ಥೆಗಳಿಗೆ ಪ್ರಚಾರ ರಾಯಭಾರಿಯಾಗಿ, ಆ ಸಂಸ್ಥೆಗಳ ಅಭಿವೃದ್ಧಿ ಪಥದಲ್ಲಿ ಮುನ್ನಡೆಯಲು ಕಾರಣರಾಗಿದ್ದರು. ಅವುಗಳಿಂದ ಬರುವ ಗಳಿಕೆಯನ್ನು ಸಮಾಜಕ್ಕಾಗಿಯೇ ವಿನಿಯೋಗಿಸುತ್ತಿದ್ದರು. ಅವುಗಳಲ್ಲಿ ಕೆಲವನ್ನು ಹೆಸರಿಸುವು ದಾದರ : ಎಲ್‌ಇಡಿ ಬಲ್ಬ್ ಬಳಕೆಗೆ ಉತ್ತೇಜನ, ಕೊರೊನಾ ನಿರೋಧಕ ಲಸಿಕೆ ಅಭಿಯಾನ, ನಂದಿನಿ ಹಾಲಿನ ಉತ್ಪನ್ನಗಳು, ಬಿಎಂಟಿಸಿ ಬಸ್ ಆದ್ಯತಾ ಪಥ, ಪ್ರವಾಸೋದ್ಯಮ ಮನವರಿಕೆ, ಗ್ರಾಮೀಣ ಯುವಜನರಿಗೆ ಸರ್ಕಾರಿ ಐಟಿಐ ಸೇರಲು ಪ್ರೋತ್ಸಾಹ, ಮತದಾನ ಜಾಗೃತಿ ಅಭಿಯಾನ, ಗ್ರಾಮೀಣ ಮಹಿಳೆಯರಿಗೆ ಸ್ವಾವಲಂಬಿ ಜೀವನಕ್ಕೆ ನೆರವಾಗುವ 'ಸಂಜೀವಿನಿ' ಯೋಜನಾ ಮಹತ್ವ ಸಾರುವ ಮೂಲಕ ಪ್ರೇರಣೆ. ಹೀಗೆ ಹಲವಾರು ಸಂಸ್ಥೆಗಳ ರಾಯಭಾರಿಯಾಗಿ ಸೇವೆ ಸಲ್ಲಿಸಿದ್ದಾರೆ. ಕೃಷಿಯ ಬಗ್ಗೆ, ರೈತರ ಬಗ್ಗೆ ಅಪಾರವಾದ ಕಾಳಜಿ, ಕಳಕಳಿಯನ್ನು ಹೊಂದಿದ್ದ ಶ್ರೀ ಪುನೀತ್ ರಾಜ್‌ಕುಮಾರ್ ಅವರು ಕೆ.ಎಂ.ಎಫ್. ನಂದಿನಿ ಉತ್ಪನ್ನಗಳಿಗೆ ರಾಯಭಾರಿ ಯಾಗಿ ಉಚಿತವಾಗಿ ಸೇವೆ ಸಲ್ಲಿಸಿದ್ದನ್ನು ಇಲ್ಲಿ ಸ್ಮರಿಸ ಬಹುದಾಗಿದೆ. ಅಲ್ಲದೆ ಸರ್ಕಾರದ ಪರವಾಗಿ ನೀಡುವ ಜಾಹಿರಾತುಗಳನ್ನು ಉಚಿತವಾಗಿ ಮಾಡುತ್ತಿದ್ದರು.



ಕಾಯಕವೇ ಕೈಲಾಸ

**ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು**
ಅಧ್ಯಕ್ಷರು, ಶ್ರೀ ಸಿದ್ಧಗಂಗಾಮಠ,
ತುಮಕೂರು ಜಿಲ್ಲೆ -572 104, ಕರ್ನಾಟಕ ರಾಜ್ಯ

0816-2282211
0816-2285133
E-mail : ssmath_swamigalu@yahoo.in

ಕ್ರ. ಸಂಖ್ಯೆ : 545/೨೧-೨೨ ದಿನಾಂಕ : ೨೯/೧೦/೨೦೨೧

## ಸಂತಾಪ ಸಂದೇಶ.

ಡಾ|| ರಾಜ್‌ಕುಮಾರ್‌ರವರ ಕಿರಿಯ ಪುತ್ರ ಶ್ರೀ.ಪುನೀತ್ ರಾಜ್‌ಕುಮಾರ್‌ರವರು ಹೃದಯಾಘಾತದಿಂದ ಮೃತರಾಗಿರುವುದನ್ನು ತಿಳಿದು ಬಹಳ ದುಃಖವಾಯಿತು. ಶ್ರೀಯುತರು ಕನ್ನಡ ಚಿತ್ರರಂಗಕ್ಕೆ ಹಾಗೂ ಕನ್ನಡ ನಾಡು ನುಡಿಗೆ ಅಪಾರ ಸೇವೆಯನ್ನು ಸಲ್ಲಿಸಿದ ಕೀರ್ತಿಗೆ ಭಾಜನರಾಗಿದ್ದಾರೆ. ಶ್ರೀ.ಪುನೀತ್ ರಾಜ್‌ಕುಮಾರ್‌ರವರು ಚಿಕ್ಕ ವಯಸ್ಸಿನಿಂದಲೇ ನಾಟಕ ಹಾಗೂ ಚಲನಚಿತ್ರಗಳಲ್ಲಿ ನಟಿಸಿ ಅಪಾರ ಅಭಿಮಾನಿಗಳನ್ನು ಸಂಪಾದಿಸಿದ್ದರು. ಅತ್ಯಂತ ಸಾಮಾಜಿಕ ಕಳಕಳಿಯುಳ್ಳ ವ್ಯಕ್ತಿತ್ವವುಳ್ಳವರಾಗಿದ್ದರಿಂದ ಅನೇಕ ಅನಾಥಾಶ್ರಮಗಳು, ಶಾಲೆಗಳು ಹಾಗೂ ಶಿಕ್ಷಣಕ್ಕೆ ಉತ್ತಮ ಕೊಡುಗೆಗಳನ್ನು ನೀಡಿರುವುದು ಅತ್ಯಂತ ಸ್ಮರಣೀಯವಾದುದಾಗಿದೆ.

ಶ್ರೀಯುತರು ಅತಿ ಚಿಕ್ಕ ವಯಸ್ಸಿನಲ್ಲಿ ದೈವಾಧೀನರಾಗಿರುವುದು ಅವರ ಕುಟುಂಬ ಹಾಗೂ ಅಭಿಮಾನಿಗಳಿಗೆ ಆಘಾತವಾಗಿದೆ. ಕನ್ನಡ ಚಿತ್ರರಂಗಕ್ಕೆ ಹಾಗೂ ನಾಡಿಗೂ ಅಪಾರ ನಷ್ಟವುಂಟಾಗಿದೆ.

ಶ್ರೀ.ಪುನೀತ್ ರಾಜ್‌ಕುಮಾರ್‌ರವರ ಅಗಲಿಕೆಯಿಂದ ಅವರ ಕುಟುಂಬ ವರ್ಗದವರಿಗೆ ಉಂಟಾದ ದುಃಖವನ್ನು ಭರಿಸುವಂತೆ ಮತ್ತು ಅವರ ಆತ್ಮಕ್ಕೆ ಪರಮಾತ್ಮನು ಚಿರಶಾಂತಿಯನ್ನು ನೀಡಲೆಂದು ಪ್ರಾರ್ಥಿಸುತ್ತೇವೆ.

(ಶ್ರೀ ಸಿದ್ಧಲಿಂಗಸ್ವಾಮಿಗಳು)
ಅಧ್ಯಕ್ಷರು.

ಡಾ. ರಾಜ್‌ಕುಮಾರ್ ಅವರು 'ಕಣ್ಣಿನ ದಾನ'ದ ಬಗ್ಗೆ ಅಭಿಯಾನವನ್ನು ಪ್ರಾರಂಭಿಸಿ ತಮ್ಮ ನಂತರ ಕಣ್ಣುಗಳನ್ನು ದಾನ ಮಾಡಿ ಅಂಧರಿಗೆ ಬೆಳಕು ನೀಡುವ ಮೂಲಕ ಮಾದರಿಯಾಗಿದ್ದರು. ಇದರಿಂದ ಅನೇಕ ಜನರು ಪ್ರೇರಣೆಯಿಂದ ತಮ್ಮ ಕಣ್ಣುಗಳನ್ನು ದಾನ ಮಾಡುತ್ತಿದ್ದಾರೆ. ಇದೇ ಪರಂಪರೆಯನ್ನು ಮುಂದುವರಿಸಿದ ಶ್ರೀ ಪುನೀತ್ ರಾಜ್‌ಕುಮಾರ್ ಅವರು ತಮ್ಮ ಸಾವಿನ ನಂತರ ಕಣ್ಣುಗಳನ್ನು ದಾನ ಮಾಡುವುದಾಗಿ ಬರೆದು ಕೊಟ್ಟಿದ್ದರು. ಅವರ ಇಚ್ಛೆಯಂತೆ ತಮ್ಮ ಕಣ್ಣುಗಳನ್ನು ದಾನ ಮಾಡುವುದರ ಮೂಲಕ ಸಾವಿನಲ್ಲೂ ಸಾರ್ಥಕ್ಯವನ್ನು ಹೊಂದಿದ್ದರು. ನಾರಾಯಣ ನೇತ್ರಾಲಯದ ವೈದ್ಯರಾದ ಡಾ. ಭುಜಂಗಶೆಟ್ಟಿ ಅವರ ಮಾಹಿತಿ ಪ್ರಕಾರ ನಾಲ್ಕು ಜನ ಅಂಧರ ಬಾಳಿಗೆ ಬೆಳಕಾಗಿದ್ದಾರೆ. ತಂದೆಯ ಹಾದಿಯಲ್ಲಿಯೇ ಮಗ ನಡೆದು 'ತಂದೆಗೆ ತಕ್ಕ ಮಗ' ಎಂಬ ಮಾತನ್ನು ಸಾಬೀತುಪಡಿಸಿದ್ದಾರೆ. ಅಲ್ಲದೆ ತಂದೆಯವರು ಹೇಳಿದಂತೆ ಅಭಿಮಾನಿಗಳು ನಮ್ಮನೆ ದೇವರು ಎಂದು ಹೃದಯ ತುಂಬಿ ಹೇಳಿದ್ದರು.

**ಶ್ರೀ ಸಿದ್ಧಗಂಗಾ ಮಠದೊಂದಿಗೆ ಅವಿನಾಭಾವ ಸಂಬಂಧ :** ಶ್ರೀ ಪುನೀತ್ ರಾಜ್‌ಕುಮಾರ್ ಅವರು ಶ್ರೀ ಸಿದ್ಧಗಂಗಾ ಮಠ ಹಾಗೂ ಪರಮಪೂಜ್ಯ ಶ್ರೀ ಶ್ರೀಗಳವರಲ್ಲಿಯೂ ಅನನ್ಯ ಭಕ್ತಿ ಗೌರವನ್ನಿಟ್ಟು ಕೊಂಡಿದ್ದರು. ಅನೇಕ ಸಲ ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯರ ದರ್ಶನ ಮಾಡಿ ಆಶೀರ್ವಾದ ಪಡೆದು ಪುನೀತರಾಗಿದ್ದರು. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಲಿಂಗೈಕ್ಯರಾದ ಸಂದರ್ಭದಲ್ಲಿ ಅವರ ಅಂತಿಮ ದರ್ಶನ ಪಡೆದು ಭಕ್ತಿಯನ್ನು ಅರ್ಪಿಸಿದ್ದರು. ಆ ಸಂದರ್ಭದಲ್ಲಿ ಅವರು ನೀಡಿದ ನುಡಿ ನಮನದಲ್ಲಿ "ಜಾತಿ ಧರ್ಮದ ಭೇದವಿಲ್ಲದೆ ಲಕ್ಷಾಂತರ ಜನಕ್ಕೆ ವಿದ್ಯಾಭ್ಯಾಸ ಕೊಟ್ಟಿರುವಂತಹ ಅವರು ನಡೆದಾಡುವ ದೇವರು. ಅವರಿಗೆ ಯಾವ ಪ್ರಶಸ್ತಿ ನೀಡಿದರೂ ಕಡಿಮೆಯೇ, ಅವರ ಆತ್ಮಕ್ಕೆ ಶಾಂತಿ ಸಿಗಲಿ. ನಮ್ಮ 'ದೊಡ್ಮನೆ ಹುಡುಗ' ಸಿನಿಮಾದ ಆಡಿಯೋ ಬಿಡುಗಡೆಯನ್ನು ಶ್ರೀಮಠದಲ್ಲಿ ಪೂಜ್ಯ ಶ್ರೀಗಳವರಿಂದ ಮಾಡಿಸಿ ಆಶೀರ್ವಾದ ಪಡೆದುಕೊಂಡಿದ್ದೆವು. ಆ ನೆನಪು ನಮಗೆಲ್ಲ ಹಚ್ಚಹಸಿರಾಗಿದೆ. ಶ್ರೀಗಳವರ ದಿವ್ಯಚರಣಗಳಿಗೆ ಭಕ್ತಿಪೂರ್ವಕ ಪ್ರಣಾಮಗಳು" ಎಂದು ಹೇಳಿದ್ದರು.




ಮೂರು ತಿಂಗಳ ಹಿಂದೆ ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಗದ್ದುಗೆ ದರ್ಶನ ಮಾಡಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ದಿವ್ಯಾಶೀರ್ವಾದ ಪಡೆದಿದ್ದರು. ಅಲ್ಲದೆ ಪ್ರಾರ್ಥನಾ ಸಭೆಯಲ್ಲಿ ಭಾಗವಹಿಸಿದ್ದರು.

ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಅಕ್ಟೋಬರ್ ೨೯ ರಂದು ಶ್ರೀ ಪುನೀತ್ ರಾಜ್‌ಕುಮಾರ್ ಅವರ ಪಾರ್ಥಿವ ಶರೀರಕ್ಕೆ ಅಂತಿಮ ಗೌರವ ಸಲ್ಲಿಸಿದುದನ್ನು ಈ ಸಂದರ್ಭದಲ್ಲಿ ಸ್ಮರಿಸಬಯಸುತ್ತೇನೆ.

**ಅಭಿಮಾನಿಗಳಿಂದ ಅಂತಿಮ ಗೌರವ :** ಬೆಂಗಳೂರಿನ ಕಂಠೀರವ ಸ್ಟೇಡಿಯಂನಲ್ಲಿ ಮೂರು ದಿನಗಳ ಕಾಲ ಅಂತಿಮ ದರ್ಶನಕ್ಕೆ ಸಕಲ ಸಿದ್ಧತೆ ಮಾಡಲಾಗಿದ್ದು. ಬೆಂಗಳೂರಲ್ಲದೆ ರಾಜ್ಯದ ಮೂಲೆ ಮೂಲೆಗಳಿಂದ ಅಭಿಮಾನಿಗಳು, ಯುವಕರಿಂದ ಹಿರಿಯ ನಾಗರಿಕರವರೆಗೆ ಸಾಗರೋಪಾದಿಯಲ್ಲಿ ಬಂದು ಅಂತಿಮ ದರ್ಶನ ಪಡೆದು ದುಃಖಿತಪ್ತರಾಗಿ ಭಾರವಾದ ಹೃದಯದಿಂದ ವಿದಾಯ



ಹೇಳಿದರು. ಚಿತ್ರರಂಗದ ಬಹುತೇಕ ಕಲಾವಿದರು, ತೆಲುಗು, ತಮಿಳು ಪ್ರಖ್ಯಾತ ನಟರು ಧಾವಿಸಿ ಬಂದು ಕಂಬನಿ ಮಿಡಿಯುತ್ತಾ ಅಂತಿಮ ದರ್ಶನ ಪಡೆದರು. ರಾಷ್ಟ್ರೀಯ ಅಂತರರಾಷ್ಟ್ರೀಯ ಮಾಧ್ಯಮಗಳು ಶ್ರೀ ಪುನೀತ್ ರಾಜ್‌ಕುಮಾರ್ ನಿಧನದ ಸುದ್ದಿಯನ್ನು ಬಿತ್ತರಿಸಿ ಅಶ್ರುತರ್ಪಣ ಸಲ್ಲಿಸಿದರು. ಸರ್ಕಾರ ಕೈಗೊಂಡ ಮುನ್ನೆಚ್ಚರಿಕೆ ಕ್ರಮಗಳಿಂದ ಯಾವುದೇ ಅಹಿತಕರ ಘಟನೆ ನಡೆಯದೆ ನಿಟ್ಟುಸಿರು ಬಿಡುವಂತಾಯಿತು. ಒಂದು ಸಮೀಕ್ಷಾ ವರದಿಯ ಪ್ರಕಾರ ೨೦ ಲಕ್ಷಕ್ಕೂ ಹೆಚ್ಚು ಜನ ಅಂತಿಮ ದರ್ಶನ ಪಡೆದುದು ಒಂದು ಐತಿಹಾಸಿಕ ದಾಖಲೆಯಾಗಿದೆ.

ಈ ಸಂದರ್ಭದಲ್ಲಿ ತತ್ತ್ವಜ್ಞಾನಿ ಸಾಕ್ರಟಿಸ್ ತಮ್ಮ ಶಿಷ್ಯರೊಂದಿಗೆ ನಡೆಸಿದ ಸಂಭಾಷಣೆಯನ್ನು ಇಲ್ಲಿ ಉಲ್ಲೇಖಿಸುವುದು ಉಚಿತವೆನಿಸುತ್ತದೆ. ಒಮ್ಮೆ ಸಾಕ್ರಟಿಸ್ ತನ್ನ ಶಿಷ್ಯರನ್ನು ಕುರಿತು ಹೀಗೆ ಕೇಳಿದ "ಜೀವನದ ಸಾರ್ಥಕ್ಯ ಯಾವುದರಲ್ಲಿದೆ?" ಶಿಷ್ಯರೆಲ್ಲ ತಮಗೆ ತೋರಿದ ಉತ್ತರಗಳನ್ನು ನೀಡಿದರು. ಗುರುವಿಗೆ ಯಾವುದೂ ಸಮರ್ಪಕವೆನಿಸಲಿಲ್ಲ. ಕೊನೆಗೆ ಸಾಕ್ರಟಿಸ್ ತಾನೇ ಉತ್ತರ ಕೊಟ್ಟ.

"ಜೀವನದ ಸಾರ್ಥಕ್ಯ ಬದುಕಿನಲ್ಲಿಲ್ಲ. ಬದುಕಿನಾಚೆ ಇದೆ. ಸತ್ತ ಮೇಲೆ ಎಷ್ಟು ಜನ ನಿಮ್ಮನ್ನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತಾರೆಯೋ ಅವರಲ್ಲಿದೆ. ಆ ಸ್ಮರಣೆ ಬರುವುದು ನೀವು ಬದುಕಿದ ಮೌಲ್ಯಗಳಿಂದ" ನಿಜ ! ಎಂಥ ಅರ್ಥಪೂರ್ಣವಾದ ಮಾತು. ಹೌದು ಬದುಕಿದರೆ ಹೀಗೆ ಬದುಕಬೇಕು. ನಮ್ಮ ಬಗ್ಗೆ ಬರೆಯುವಂತೆ ಬದುಕಬೇಕು. ವಿಶ್ವಪ್ರಸಿದ್ಧ ಮಹಾನ್ ಸಂತ ಜಲಾಲುದ್ದೀನ್ ರೂಮಿಯಾ ಹೇಳಿರುವಂತೆ "ನೀವು ಈ ಜಗತ್ತನ್ನು ಬಿಡುವಾಗ ನಿನ್ನ ವಿಶ್ರಾಂತಿ ಸ್ಥಳವನ್ನು ನೆಲದಲ್ಲಿ ಹುಡುಕಬೇಡ. ಜನರ ಹೃದಯದಲ್ಲಿ ಕಂಡುಕೋ". ಹೌದು ಅವರ ಮಾತು ಅಕ್ಷರಶಃ ಸತ್ಯ. ಶ್ರೀ ಪುನೀತ್ ರಾಜ್‌ಕುಮಾರ್ ಅವರು ತಮ್ಮ ಮಾನವೀಯ ಗುಣಗಳಿಂದ ಕೋಟ್ಯಾಂತರ ಅಭಿಮಾನಿಗಳ ಹೃದಯದಲ್ಲಿ ಶಾಶ್ವತವಾಗಿ ನೆಲಸಿದ್ದಾರೆ. ಅವರು ನೀಲಾಕಾಶದಲ್ಲಿ ಸದಾ ಪ್ರಕಾಶಮಾನವಾಗಿ ಮಿನುಗುವ ಧೃವನಕ್ಷತ್ರ.

ಶ್ರೀ ಪುನೀತ್ ರಾಜ್‌ಕುಮಾರ್ ಅವರು ಪತ್ನಿ ಶ್ರೀಮತಿ ಅಶ್ವಿನಿ, ಮಕ್ಕಳಾದ ಧೃತಿ, ವಂದಿತಾ, ಸೋದರರಾದ ಶ್ರೀ ಶಿವರಾಜ್‌ಕುಮಾರ್, ಶ್ರೀ ರಾಘವೇಂದ್ರ ರಾಜ್‌ಕುಮಾರ್, ಸೋದರಿಯರಾದ ಶ್ರೀಮತಿ ಲಕ್ಷ್ಮೀ, ಶ್ರೀಮತಿ ಪೂರ್ಣಿಮಾ ಸೇರಿದಂತೆ ಅಪಾರವಾದ ಬಂಧು ಬಳಗವನ್ನು, ಅಭಿಮಾನಿಗಳನ್ನು ಅಗಲಿದ್ದಾರೆ. ಅವರ ಆತ್ಮಕ್ಕೆ ಚಿರಶಾಂತಿಯನ್ನು, ಅವರ ಅಗಲಿಕೆಯ ದುಃಖವನ್ನು ಸಹಿಸುವ ಶಕ್ತಿಯನ್ನು ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲಿ ಎಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.

– ಎಚ್.ಎಸ್. ಸಿದ್ಧಗಂಗಪ್ಪ



ಪ್ರಾತಃಸ್ಮರಣೀಯರು

# ಕಾದಂಬರಿ ಸಾರ್ವಭೌಮ, ಕನ್ನಡದ ಕಿಂದರ ಜೋಗಿ ಡಾ. ಅ.ನ. ಕೃಷ್ಣರಾಯರು

– ಎಚ್.ಎಸ್. ಸಿದ್ಧಗಂಗಪ್ಪ *



ನೂರ ಹನ್ನೆರಡು ಕಾದಂಬರಿಗಳನ್ನು ಲೋಕಾರ್ಪಣೆ ಮಾಡುವುದರ ಮೂಲಕ 'ಕಾದಂಬರಿ ಸಾರ್ವಭೌಮ' ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದ ಡಾ. ಅ.ನ. ಕೃಷ್ಣರಾಯರು ಇನ್ನೂರಕ್ಕೂ ಹೆಚ್ಚು ಕೃತಿಗಳನ್ನು ರಚಿಸುವುದರ ಮೂಲಕ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ಕನ್ನಡ ನಾಡು-ನುಡಿಯ ಬಗ್ಗೆ ಅಪಾರ ಅಭಿಮಾನ, ಕಳಕಳಿ, ಬದ್ಧತೆಯನ್ನು ಹೊಂದಿದ್ದ ಶ್ರೀಯುತರು ಕನ್ನಡ ಚಳವಳಿಗಾರರಾಗಿ, ಪತ್ರಕರ್ತರಾಗಿ, ಸಾಹಿತಿಯಾಗಿ, ಕಾದಂಬರಿಗಾರರಾಗಿ ಅವರು ಸಲ್ಲಿಸಿದ ಸೇವೆ ಅನುಪಮವಾದುದು. ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ, ಜಗಜ್ಯೋತಿ ಬಸವೇಶ್ವರ, ಜಾತಿಹೀನನ ಮನೆಯ ಜ್ಯೋತಿ, ಅಲ್ಲಮಪ್ರಭು, ವಿಶ್ವಬಂಧು ಬಸವೇಶ್ವರ ಕೃತಿಗಳನ್ನು ರಚಿಸಿದರಲ್ಲದೆ, ೨೦೦ ವಚನಗಳನ್ನು ಸಂಪಾದಿಸಿ ವಚನ ಸಾಹಿತ್ಯ ಕ್ಷೇತ್ರಕ್ಕೆ ಅಮೂಲ್ಯ ಕೊಡುಗೆ ನೀಡಿದ್ದಾರೆ.

**ಜನನ-ಶಿಕ್ಷಣ :** ಹುಟ್ಟಿದ ವರ್ಷ ೧೯೦೮, ಹುಟ್ಟಿದೂರು ಹಾಸನ ಜಿಲ್ಲೆ ಅರಕಲಗೂಡು. ತಂದೆ ಅರಕಲಗೂಡು ನರಸಿಂಹರಾಯರು, ತಾಯಿ ಶ್ರೀಮತಿ ಅನ್ನಪೂರ್ಣಮ್ಮ. ನರಸಿಂಗರಾಯರು ಪ್ರಸಿದ್ಧ ವಕೀಲರಾಗಿದ್ದರು. ಸುಸಂಸ್ಕೃತ ಸಂಪ್ರದಾಯಸ್ಥ ಕುಟುಂಬ. ಮನೆಯಲ್ಲಿ ಸದಾ ನಡೆಯುತ್ತಿದ್ದ ರಾಮಾಯಣ, ಮಹಾಭಾರತ ಪುರಾಣಗಳ ಪಾರಾಯಣ, ಬಾಲಕ ಕೃಷ್ಣರಾಯರ ಮೇಲೆ ಗಾಢವಾದ ಪ್ರಭಾವ ಬೀರಿತು. ಹಾಗಾಗಿ ಅವರಿಗರಿವಿಲ್ಲದೆ ಸಾಹಿತ್ಯದ ಮೇಲಿನ ಪ್ರೀತಿ, ಮನಸಿನಲ್ಲಿ ಮೂಡಿದ ಭಾವನೆಗಳನ್ನು ಅಕ್ಷರರೂಪದಲ್ಲಿ ಹಿಡಿದಿಡಬೇಕೆಂಬ ತುಡಿತಕ್ಕೆ ನಿದರ್ಶನವಾಗಿ ಹದಿನಾರನೇ ವಯಸ್ಸಿನಲ್ಲಿಯೇ 'ಮದುವೆಯೋ ಮನೆಹಾಳೋ' ಮೊದಲ ಕಾದಂಬರಿ ಬರೆಯುವುದರ ಮೂಲಕ ಸಾಹಿತ್ಯ ಕ್ಷೇತ್ರಕ್ಕೆ ಪಾದಾರ್ಪಣೆ ಮಾಡಿದರು. ಬೆಂಗಳೂರಿನಲ್ಲಿ ವಿದ್ಯಾಭ್ಯಾಸ ಮಾಡಿದರೂ, ತಂದೆ ತಾಯಿಗಳ ಆಶಯದಂತೆ ಪೂರ್ಣಗೊಳಿಸಲಿಲ್ಲ. ಕಲಕತ್ತೆಗೆ ಹೋಗಿ ಶಾಂತಿನಿಕೇತನದಲ್ಲಿ ಕಾವ್ಯರ್ಷಿ ರವೀಂದ್ರನಾಥ ಟ್ಯಾಗೂರರ ಮಾರ್ಗದರ್ಶನದಲ್ಲಿ ಕಲೆ ಮತ್ತು ಸಾಹಿತ್ಯದ ಬಗ್ಗೆ ಶಿಕ್ಷಣ ಪಡೆದರು, ಟ್ಯಾಗೂರರ ಮುಂದೆ ಅನೇಕ ಸಂದರ್ಭದಲ್ಲಿ ಭಾಷಣ ಮಾಡಿ ಉತ್ತಮ ವಾಗ್ಮಿಯೆಂದು ಬೆನ್ನು ತಟ್ಟಿಸಿಕೊಂಡ ಪುಣ್ಯಜೀವಿ. ಇಂಥ ಭಾಗ್ಯ ಎಷ್ಟು ಜನರಿಗೆ ಸಿಗುತ್ತದೆ !

**ಪತ್ರಕರ್ತರಾಗಿ :** ಬರವಣಿಗೆ ಅವರಿಗೆ ನಿತ್ಯ ಕಾಯಕವಾಗಿತ್ತು. ಯಾವುದೇ ವಿಷಯವನ್ನು ಕುರಿತು ಬರೆಯುವಾಗ ಅಧ್ಯಯನ ಮಾಡಿ ವಸ್ತುನಿಷ್ಠವಾಗಿ, ಸರಳವಾಗಿ, ಜನಸಾಮಾನ್ಯರಿಗೂ ಮನಮುಟ್ಟುವಂತೆ ಬರೆಯುವ ಕಲೆಯನ್ನು ರೂಢಿಸಿಕೊಂಡಿದ್ದರು. ಸ್ವಲ್ಪಕಾಲ 'ಬಾಂಬೆ ಕ್ರಾನಿಕಲ್' ನಲ್ಲಿ ಸೇವೆ ಸಲ್ಲಿಸಿದರು. ೧೯೨೯ ರಲ್ಲಿ 'ಕಥಾಂಜಲಿ' ಎಂಬ ಮಾಸಪತ್ರಿಕೆಯನ್ನು ಪ್ರಾರಂಭಿಸಿದರು. ಬೆಂಗಳೂರಿನಲ್ಲಿ 'ವಿಶ್ವವಾಣಿ' ಪತ್ರಿಕೆಯ ಸಂಪಾದಕರಾಗಿಯೂ ಕಾರ್ಯನಿರ್ವಹಿಸಿದರು. ಕನ್ನಡಿಗರ ಸಾರ್ವಭೌಮ ಸಂಸ್ಥೆ, ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಪ್ರಕಟವಾಗುತ್ತಿದ್ದ 'ಕನ್ನಡ ನುಡಿ' ಸಂಪಾದಕರಾಗಿ ಒಂದು ವರ್ಷ ಸೇವೆ ಸಲ್ಲಿಸಿದರು. ಇಂತಹ ಮಹಾನುಭಾವರು ಸೇವೆ ಸಲ್ಲಿಸಿದ್ದ 'ಕನ್ನಡ ನುಡಿ'ಯ ಸಂಪಾದಕನಾಗಿ ಸೇವೆ ಸಲ್ಲಿಸುವ ಅವಕಾಶ ನನಗೆ ದೊರೆತಿದುದು ನನ್ನ ಸುಯೋಗವೆಂದೇ ಭಾವಿಸಿದ್ದೇನೆ. ಸಂಪಾದಕನಾಗಿ ಸೇವೆ ಮಾಡಲು ಅವಕಾಶ ನೀಡಿದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಡಾ. ಗೊ.ರು. ಚನ್ನಬಸಪ್ಪ ಅವರನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತೇನೆ.

**ಕನ್ನಡ ಚಳುವಳಿಗಾರರಾಗಿ :** ನಾಡು-ನುಡಿಯ ಬಗ್ಗೆ ಅಪಾರ ಅಭಿಮಾನ, ಕಳಕಳಿಯನ್ನು ಹೊಂದಿದ್ದ ಅ.ನ.ಕೃ. ಅವರು ಕನ್ನಡ ಭಾಷೆಯ ಬಗ್ಗೆ ಜನರಲ್ಲಿ ಅಭಿಮಾನವುಂಟಾಗುವಂತೆ ಮಾಡಲು 'ಪ್ರಗತಿಶೀಲ' ಸಾಹಿತ್ಯ ಸಂಘಟನೆಯ ಮೂಲಕ ಪ್ರಾಮಾಣಿಕ ಪ್ರಯತ್ನ ಮಾಡಿದರು. ಗಡಿನಾಡು ಪ್ರದೇಶದಲ್ಲಿ ಪರಭಾಷೆಯವರು ಕನ್ನಡಿಗರ ಮೇಲೆ ಮಾಡುತ್ತಿದ್ದ ಆಕ್ರಮಣ ಪ್ರವೃತ್ತಿಯನ್ನು ಚಳುವಳಿಯ ಮೂಲಕ ಪ್ರತಿಭಟಿಸಿ ಬಿಸಿ ಮುಟ್ಟಿಸಿದರು. ಕರ್ನಾಟಕದ ಗಡಿ ಪ್ರದೇಶದಲ್ಲಿ ತಮ್ಮ ಅನಾರೋಗ್ಯವನ್ನು ಲೆಕ್ಕಿಸದೆ ಅನೇಕ ಬಾರಿ ಪ್ರವಾಸ ಮಾಡಿ ತಮ್ಮ ವಿಚಾರಪೂರಿತ ಭಾಷಣಗಳಿಂದ ಕನ್ನಡಿಗರ ಎದೆಯನ್ನು ತಟ್ಟಿ ಕನ್ನಡದ ಕೆಚ್ಚನ್ನು

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೬೫೮೭೧

ಉದ್ದೀಪನಗೊಳಿಸಿದರು. ಅವರೊಬ್ಬ ಪ್ರಜ್ಞಾವಂತ ವಾಗ್ಮಿಯಾದುದರಿಂದ ಕನ್ನಡಿಗರಲ್ಲಿ ಭಾಷಾ ಪ್ರೇಮವನ್ನು ಬೆಳೆಸಿದರು. ಸಾಹಿತ್ಯ ಕ್ಷೇತ್ರದಲ್ಲಿ ತಾವೊಬ್ಬರೆ ಬೆಳೆಯದೆ ಉದಯೋನ್ಮುಖ ಬರಹಗಾರರಿಗೆ ಪ್ರೀತಿಯಿಂದ ಪ್ರೋತ್ಸಾಹ ನೀಡಿದರು. ಈ ಸಂದರ್ಭದಲ್ಲಿ ಎರಡು ಘಟನೆಗಳನ್ನು ಉಲ್ಲೇಖಿಸಿದರೆ ಅ.ನ.ಕೃ. ಅವರ ಹೃದಯ ವೈಶಾಲ್ಯತೆಯ ಅನಾವರಣವಾಗುತ್ತದೆ.

ಒಮ್ಮೆ ಚದುರಂಗ ಅವರು ತಾವು ಬರೆದ ಹಸ್ತಪ್ರತಿಗಳನ್ನು ಒಬ್ಬ ಪ್ರಖ್ಯಾತ ಸಾಹಿತಿ ಎಂಬ ಭ್ರಮೆಯಲ್ಲಿದ್ದವರ ಹತ್ತಿರ ತೆಗೆದುಕೊಂಡು ಹೋಗಿ ಹಸ್ತ ಪ್ರತಿಗಳನ್ನು ತೋರಿಸಿ, ತಾವು ದಯವಿಟ್ಟು ಮುನ್ನುಡಿ ಬರೆದು ಕೊಡಬೇಕೆಂದು ವಿನಂತಿಸಿಕೊಂಡಾಗ ಅವರು ನೀಡಿದ ಉತ್ತರ 'ನನಗೆ ನಿಮ್ಮ ಹಸ್ತಪ್ರತಿಗಳನ್ನು ಅವಲೋಕಿಸಲು ವ್ಯವಧಾನವೂ ಇಲ್ಲ, ಬರೆದುಕೊಡಲು ಸಮಯವೂ ಇಲ್ಲ' ಎಂದು ಮುಖಕ್ಕೆರಾಚುವಂತೆ ಹೇಳಿ ಹಸ್ತಪ್ರತಿಗಳನ್ನು ಹಿಂತಿರುಗಿಸಿದಾಗ ಉತ್ಸಾಹದಿಂದ ಬಂದ ಚದುರಂಗರಿಗೆ ಭೂಮಿಯೇ ಕುಸಿಯುವಂತ ಅನುಭವ. ಅವಮಾನವಾಗಿ ಖಿನ್ನತೆಯಿಂದ ಹಿಂದಿರುಗಿದರು. ಈ ವಿಚಾರವನ್ನು ತಿಳಿದ ಆತ್ಮೀಯರೊಬ್ಬರು ಅ.ನ.ಕೃ. ಅವರ ಹತ್ತಿರ ಹೋಗುವಂತೆ ಸಲಹೆ ನೀಡಿದರು. ಸ್ನೇಹಿತರ ಮಾತನ್ನು ತಿರಸ್ಕರಿಸಲಾಗದೆ ಸಂಕೋಚದಿಂದಲೇ ಅ.ನ.ಕೃ. ಅವರ ಹತ್ತಿರ ಹೋಗಿ ತಾವು ತೆಗೆದುಕೊಂಡ ಹೋಗಿದ್ದ ಹಸ್ತ ಪ್ರತಿಗಳನ್ನು ನೀಡಿ ಮುನ್ನುಡಿ ಬರೆದುಕೊಡುವಂತೆ ಪ್ರಾರ್ಥಿಸಿದರು. ಅ.ನ.ಕೃ. ಅವರು ಹಸ್ತಪ್ರತಿಗಳನ್ನು ಅವಲೋಕಿಸುತ್ತಾ ಹೋದಂತೆ ಅವರ ಮುಖ ಅರಳತೊಡಗಿತು. ಚದುರಂಗ ಅವರನ್ನು ಕುರಿತು ಏನು ಶೈಲಿ, ಭಾಷಾ ಪ್ರಯೋಗ, ಅದ್ಭುತ ಎಂದು ಬೆನ್ನುತಟ್ಟಿ ಅರ್ಥಪೂರ್ಣವಾದ ಮುನ್ನುಡಿಯನ್ನು ಬರೆದುಕೊಟ್ಟು ಶುಭ ಹಾರೈಸಿದರು. ಅಂದು ಅವರು ಬೆನ್ನುತಟ್ಟಿ ಮುನ್ನುಡಿಯನ್ನು ಬರೆದುಕೊಡದೇ ಹೋಗಿದ್ದರೆ ಸಾಹಿತಿ ಚದುರಂಗರಾಗಿ ರೂಪುಗೊಳ್ಳುತ್ತಿರಲಿಲ್ಲವೇನೋ! ಕನ್ನಡ ಸಾರಸ್ವತ ಲೋಕಕ್ಕೆ ಅವರ ಪರಿಚಯ ಆಗುತ್ತಿರಲಿಲ್ಲವೇನೋ ! ಅವರು ಮುಂದೆ ಅಖಿಲ ಭಾರತ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗುವ ಸುಯೋಗ ದೊರೆಯುತ್ತಿರಲಿಲ್ಲ. ಅ.ನ.ಕೃ. ಅವರು ತಮ್ಮ ಜೀವಿತಾವಧಿಯಲ್ಲಿ ಚದುರಂಗರಂತಹ ಅನೇಕ ಜನ ಉದಯೋನ್ಮುಖ ಬರಹಗಾರರಿಗೆ ಪ್ರೋತ್ಸಾಹ ನೀಡಿ ಬೆಳೆಯುವಂತೆ ಮಾಡಿರುವುದು ಅವರ ಹೃದಯ ಶ್ರೀಮಂತಿಕೆಯ ದ್ಯೋತಕ.

ಮತ್ತೊಂದು ಘಟನೆ. ಒಮ್ಮೆ ಅ.ನ.ಕೃ. ಅವರು ಧಾರವಾಡಕ್ಕೆ ಹೋಗಿದ್ದಾಗ ಡಾ. ಹೆಚ್.ಕೆ. ರಂಗನಾಥ ಅವರ ಮನೆಯಲ್ಲಿ ರಾತ್ರಿ ತಂಗುತ್ತಾರೆ. ಊಟ ಮಾಡುತ್ತಿದ್ದಾಗ ಉಭಯ ಕುಶಲೋಪಹರಿ ಮಾತನಾಡುತ್ತಾ ರಂಗನಾಥರು ನಾನು ಸಂಶೋಧನೆ ಮಾಡುತ್ತಿದ್ದೇನೆ. ಆದರೆ ನನಗೆ ಅಗತ್ಯವಿರುವ ಹಳೆಯ ಮ್ಯಾಗೈಸನ್‌ಗಳು ಸಿಗುತ್ತಿಲ್ಲ. ಇದರಿಂದ ನನ್ನ ಸಂಶೋಧನೆಗೆ ಹಿನ್ನಡೆಯಾಗಿದೆ ಎಂದು ಹೇಳಿ, ಅವುಗಳ ಪಟ್ಟಿಯನ್ನು ಅ.ನ.ಕೃ. ಮುಂದೆ ಹೇಳುತ್ತಾರೆ. ಆದರೆ ಕೇಳಿಯೂ ಕೇಳಿಸಿಕೊಳ್ಳದಂತೆ ಊಟ ಮಾಡುತ್ತಾರೆ. ಅ.ನ.ಕೃ. ಅವರಿಂದ ಪ್ರತಿಕ್ರಿಯೆ ಬಾರದಿದ್ದಾಗ ಅವರಿಗೆ ಆಸಕ್ತಿಯಿಲ್ಲ ಎಂದು ಸುಮ್ಮನಾಗುತ್ತಾರೆ.

ಒಂದು ವಾರದ ನಂತರ ರೈಲ್ವೆ ಇಲಾಖೆಯಿಂದ ಒಂದು ನೋಟೀಸ್ ಬರುತ್ತದೆ. ಅದರಲ್ಲಿ ನಿಮಗೆ ಒಂದು ಬಂಡಲ್ ಬಂದಿದೆ. ತೆಗೆದುಕೊಂಡು ಹೋಗಿ ಎಂದಿರುತ್ತದೆ. ಇದನ್ನು ನೋಡಿ ರಂಗನಾಥ್ ಅವರಿಗೆ ಆಶ್ಚರ್ಯ. ನನಗಾರು ಕಳುಹಿಸುತ್ತಾರೆಂದು. ರೈಲ್ವೆ ಇಲಾಖೆಗೆ ಹೋಗಿ ಬಂಡಲ್‌ನ್ನು ಮನೆಗೆ ತಂದು ಬಿಚ್ಚಿ ನೋಡಿದಾಗ ಅವರಿಗೆ ಮಹಾದಾಶ್ಚರ್ಯ ವಾಗುತ್ತದೆ. ಒಂದು ವಾರದ ಹಿಂದೆ ಅ.ನ.ಕೃ. ಅವರು ಮನೆಗೆ ಬಂದಾಗ ತಾವು ಹೇಳಿದ ಎಲ್ಲ ಸಂಚಿಕೆಗಳ ಜೊತೆಗೆ ಸಂಶೋಧನೆಗೆ ಪೂರಕವಾಗುವ ಬೇರೆ ಅಮೂಲ್ಯ ಕೃತಿಗಳನ್ನು ಕಳುಹಿಸಿರುತ್ತಾರೆ. ಇದನ್ನು ನೋಡಿ ರಂಗನಾಥ ಅವರಿಗೆ ತುಂಬಾ ಸಂತೋಷವಾಗುತ್ತದೆ. ಅವುಗಳಿಂದ ಪ್ರಯೋಜನ ಪಡೆದು ನಂತರ ಎಲ್ಲಾ ಸಂಚಿಕೆ ಹಾಗೂ ಕೃತಿಗಳನ್ನು ಪ್ರಾಮಾಣಿಕತೆ ಯಿಂದ ಹಿಂತಿರುಗಿಸಿದಾಗ ಅ.ನ.ಕೃ. ಅವರು ಪ್ರಾಮಾಣಿಕತೆಗೆ ಸಂತೋಷಪಟ್ಟು ಅದರಲ್ಲಿನ ಕೆಲವು ಅಮೂಲ್ಯ ಕೃತಿಗಳನ್ನು ತಮ್ಮ ಹಸ್ತಾಕ್ಷರದೊಂದಿಗೆ ಹಿಂತಿರುಗಿಸುತ್ತಾರೆ. ಇದು ಅವರ ಮಾನವೀಯತೆಗೆ ಹಿಡಿದ ಕನ್ನಡಿ.

**ಶರಣ ಸಾಹಿತ್ಯಕ್ಕೆ ಕೊಡುಗೆ :** ಶರಣ ಸಾಹಿತ್ಯ ಕ್ಷೇತ್ರಕ್ಕೆ ಅಮೂಲ್ಯ ಕೊಡುಗೆ ನೀಡಿದ ಶ್ರೇಷ್ಠ ಸಂಶೋಧಕರೂ, ವಿದ್ವಾಂಸರಲ್ಲಿ ಫ.ಗು. ಹಳಕಟ್ಟಿಯವರು ಅಗ್ರಗಣ್ಯರು. ಚಿರಸ್ಮರಣೀಯರು. ಅವರು ಹಾಕಿಕೊಟ್ಟ ಮಾರ್ಗದರ್ಶನ, ಕ್ರಮಿಸಿದ ದಾರಿಯಲ್ಲಿ ಮುಂದುವರೆದವರು. ವಿದ್ವಾಂಸರಾದ ಎಂ.ಆರ್. ಶ್ರೀನಿವಾಸಮೂರ್ತಿಯವರು, ತಳುಕಿನ ವೆಂಕಣ್ಣಯ್ಯನವರು, ಡಿ.ಎಲ್. ನರಸಿಂಹಾಚಾರ್ಯರು, ತೀ.ನಂ. ಶ್ರೀಕಂಠಯ್ಯನವರು, ಡಾ. ರಂ.ರಾ. ದಿವಾಕರರ ಸಾಲಿನಲ್ಲಿ ಡಾ. ಅ.ನ.ಕೃಷ್ಣರಾಯರು ಸೇರುತ್ತಾರೆ.

ಅ.ನ.ಕೃ. ಅವರು ಶರಣ ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಕೊಡುಗೆಯನ್ನು ಪ್ರಸ್ತಾಪಿಸುವಾಗ ಕನಿಷ್ಠ ಪಕ್ಷ ೭-೮ ದಶಕಗಳ ಹಿಂದಿನ ಪರಿಸ್ಥಿತಿಯನ್ನು, ಸಾಹಿತ್ಯಿಕ ಸ್ಥಿತಿಯನ್ನು ಗಮನಿಸಬೇಕಾಗುತ್ತದೆ. ಇಂದು ಯಾರು ಬೇಕಾದರೂ, ಯಾವ ಧರ್ಮಗುರು, ಮಹಾಚಾರ್ಯರನ್ನು ಕುರಿತು ಅವರ ಜೀವನ ಚರಿತ್ರೆ, ಸಾಧನೆ, ಸಾಹಿತ್ಯ, ವಚನಗಳನ್ನು ಕುರಿತು ಯಾವ ಮತಾವಲಂಬಿಯಾದರೂ ನಿರ್ಭಯವಾಗಿ, ನಿರ್ಬಂಧವಿಲ್ಲದೆ, ಯಾವ ಆಕ್ಷೇಪಣೆಗೂ ಕಿವಿಗೊಡದೆ ಬರೆಯಬಹುದು. ಆದರೆ ಆಗ ಪರಿಸ್ಥಿತಿ ಹಾಗಿರಲಿಲ್ಲ. ಈ ಮಾತಿಗೆ ನಿದರ್ಶನವಾಗಿ ಅ.ನ.ಕೃ. ಅವರ ಜೀವನದಲ್ಲಿ ನಡೆದ



ಘಟನೆಯೊಂದನ್ನು ಇಲ್ಲಿ ಉಲ್ಲೇಖಿಸುವುದು ಉಚಿತ ವೆನಿಸುತ್ತದೆ.

ಅ.ನ.ಕೃ. ಅವರನ್ನು ಮೂರರ ದಶಕದಲ್ಲಿ ಹರಪನಹಳ್ಳಿ ಯಲ್ಲಿ ಬಸವ ಜಯಂತಿ ಉತ್ಸವಕ್ಕಾಗಿ ಅಲ್ಲಿಯ ಉತ್ಸವ ಸಮಿತಿಯವರು ಆಹ್ವಾನಿಸಿದ್ದರು. ಅ.ನ.ಕೃ. ಅವರು ಹರಪನ ಹಳ್ಳಿಯಲ್ಲಿ ಅಂದಿನ ಪ್ರಸಿದ್ಧ ವೈದ್ಯರು, ಸಾಹಿತ್ಯಾಭಿಮಾನಿಗಳೂ ಆದ ರಾಮರಾಯರ ಮನೆಯಲ್ಲಿ ತಂಗಿದ್ದರು. ಸಂಜೆ ಅವರ ಭಾಷಣ ಗೊತ್ತಾಗಿತ್ತು. ಹರಪನಹಳ್ಳಿಯಲ್ಲಿ ಹಾಗೂ ತಾಲ್ಲೂಕಿನಲ್ಲಿ ಬೇರೆ ಯಾವುದೋ ಕಾರಣಕ್ಕಾಗಿ ಲಿಂಗಾಯತರಿಗೂ ಬ್ರಾಹ್ಮಣರಿಗೂ ಮನಸ್ತಾಪವಾಗಿತ್ತು. ಒಳಗೊಳಗೆ ಕುದಿಯುತ್ತಿದ್ದ ದ್ವೇಷದ ಜ್ವಾಲೆ ಈ ಸಂದರ್ಭದಲ್ಲಿ ಸ್ಫೋಟಗೊಂಡಿತು. ಬ್ರಾಹ್ಮಣರು ಭಾಷಣ ಮಾಡಬೇಡಿ ಎಂದು ಒತ್ತಡ ಹೇರಿದರು. ಪ್ರಬಲವಾದ ಒತ್ತಡ ಬಂದರೂ ಅತಿಥೇಯರ ಮನಸ್ಸಿಗೆ ಬೇಸರವಾದರೂ ಬಸವಣ್ಣನವರನ್ನು ಕುರಿತು ಭಾಷಣ ಮಾಡಿದರು. ಭಾಷಣ ಕೇಳಿದ ಮೇಲೆ ಎಲ್ಲಾ ಧರ್ಮದಲ್ಲೂ ಮಹಾನುಭಾವರಿರುವಂತೆ ಬಸವೇಶ್ವರರೂ ಒಬ್ಬ ಮಹಾತ್ಮ ಎಂಬುದನ್ನು ಒಪ್ಪಿಕೊಂಡರು. ಅದುವರೆಗೂ ಮೂಡಿದ್ದ ವಿರಸ ತಿಳಿಯಾಯಿತು.

ಆಗಿನ ಕಾಲದಲ್ಲಿ ಅ.ನ.ಕೃ. ಅವರು ಶರಣ ಸಾಹಿತ್ಯ ಕ್ಷೇತ್ರದಲ್ಲಿ ಕೆಲಸ ಮಾಡಿದ್ದು, ಅತ್ಯುತ್ತಮ ಗ್ರಂಥಗಳನ್ನು ಸಂಪಾದನೆ ಮಾಡಿ ರಚಿಸಿದ್ದು ಅವರ ತತ್ತ್ವ ನಿಷ್ಠೆ, ಉದಾರ ದೃಷ್ಟಿ ಮತ್ತು ಸರ್ವಮತ ಸಮನ್ವಯದ ಉದಾತ್ತ ನಿಲುಮೆಯ ದ್ಯೋತಕ. ಅವರೇ ಹೇಳಿರುವಂತೆ "ವಚನ ಶಾಸ್ತ್ರ ಕೇವಲ ವೀರಶೈವರಿಗೆ ಸೇರಿದ್ದಲ್ಲ. ಅದು ಇತರರಿಗೆ ಸಂಬಂಧಿಸಿದುದಲ್ಲ ಎಂದು ವೀರಶೈವೇತರು ಭಾವಿಸುವುದು ತಪ್ಪು. ಬಸವಣ್ಣನವರು ಬುದ್ಧ, ಕ್ರಿಸ್ತ, ಮಹಮದ್‌ರಂತೆ ಜಗಜ್ಯೋತಿಗಳ ಸಾಲಿಗೆ ಸೇರಿದವರು. ಅವರ ವಚನಗಳನ್ನು ಆರಿಸುವಾಗಲೂ ಇದೇ ಧೋರಣೆಯನ್ನು ಅನುಸರಿಸಿದ್ದೇನೆ". ವೀರಶೈವರನ್ನು ಉದ್ದೇಶಿಸಿ ಅವರು 'ವೀರಶೈವರಾದರೂ ಈ ಬೆಳಕಿನ ಕಿಂಡಿಗಳನ್ನು ಏಕೆ ಮುಚ್ಚಬೇಕು' ಎಂದು ಕೇಳುತ್ತಾರೆ.

೧೯೩೩ ರಷ್ಟು ಹಿಂದೆಯೇ 'ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ' ಎಂಬ ಗ್ರಂಥ ರಚನೆ ಮಾಡಿದರು. ಈ ಉತ್ತಮ ಗ್ರಂಥ ರಚನೆಯ ಹಿಂದಿದ್ದ ಅವರ ಮನೋಭಾವ ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ ಒಂದು ಜಾತಿಮತದ ಖಾಸಗಿ ಸ್ವತ್ತಲ್ಲ. ಆತ್ಮೋದ್ಧಾರ ಹಾಗೂ ಲೋಕೋದ್ಧಾರಕ್ಕೆ ಶರಣರು ತೋರಿದ ದಾರಿ ಎಂಬುದನ್ನು ಅ.ನ.ಕೃ. ಅವರು ಬುದ್ಧಿಪೂರ್ವಕವಾಗಿ ಮೆಚ್ಚಿ, ಹೃತ್ಪೂರ್ವಕವಾಗಿ ಒಪ್ಪಿಕೊಂಡಿದ್ದರು. ಅವರ ಆ ಮೆಚ್ಚುಗೆ ಮತ್ತು ಒಪ್ಪಿಗೆ ಮತ್ತೊಬ್ಬರ ಅಂದರೆ ವೀರಶೈವರ ಮತ್ತು ಬಸವಣ್ಣನವರ ಭಕ್ತರ ಮೆಚ್ಚಿಗೆ ಗಳಿಸಕ್ಕಾಗಿ ಅಲ್ಲ; ಅವರ ಈ ಜಾತ್ಯಾತೀತ ದೃಷ್ಟಿ ಕೇವಲ ಪರರಿಗೆ ಉಪದೇಶ ಮಾಡುವುದಕ್ಕಾಗಿ ಆಗಿರಲಿಲ್ಲ. ಅವರು ಜೀವನದಲ್ಲಿ ಅಳವಡಿಸಿಕೊಂಡ ನಿತ್ಯ ಜೀವನದಲ್ಲಿ ಆಚರಿಸಿದ ತತ್ತ್ವವಾಗಿತ್ತು.

ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಕುರಿತು ಬರೆಯಲು ಅ.ನ.ಕೃ. ಅವರಿಗೆ ಮತ್ತೊಂದು ವಿಶೇಷವಾದ ಅನುಭವದ ಅರ್ಹತೆಯಿತ್ತು. ಗ್ರಂಥಾಧ್ಯಯನದಿಂದ ಒಂದು ಧರ್ಮವನ್ನು ತಿಳಿದುಕೊಳ್ಳುವುದು ಬೇರೆ. ಹಾಗೆ ತಿಳಿದುಕೊಂಡು ಬರೆದವರಲ್ಲಿ ಎಂ.ಆರ್. ಶ್ರೀನಿವಾಸಮೂರ್ತಿ ಯವರು ಅಗ್ರಗಣ್ಯರು. ಅಷ್ಟೇ ವಿದ್ವತ್‌ಪೂರ್ಣವಾಗಿ ಬರೆದವರು ರಂ.ರಾ. ದಿವಾಕರ ರವರು. ಎಂ.ಆರ್.ಶ್ರೀ. ಅವರು 'ಭಕ್ತಿ ಭಂಡಾರಿ ಬಸವಣ್ಣ', ದಿವಾಕರರ 'ವಚನಶಾಸ್ತ್ರ ರಹಸ್ಯ' ಅಪೂರ್ವವಾದ ವಿದ್ವತ್‌ಪೂರ್ಣ ಗ್ರಂಥಗಳು. ಅ.ನ.ಕೃ. ಅವರು ಶರಣ ಸಾಹಿತ್ಯಕ್ಕೆ ಸಂಬಂಧಿಸಿದ ಗ್ರಂಥಗಳಲ್ಲಿ ವಿಶಿಷ್ಟವಾದ ಮತ್ತೊಂದು ಗ್ರಂಥ 'ವಿಶ್ವಬಂಧು ಬಸವೇಶ್ವರ' (೧೯೫೪). ವೀರಶೈವರೊಡನೆ ಅವರು ಪಡೆದ ಅನುಭವ, ಅವರ ರೀತಿ, ನೀತಿ, ನಡವಳಿಕೆಗಳನ್ನು ಹತ್ತಿರದಿಂದ ಕಂಡುದುದರಿಂದ ಇಂತಹ ವಿದ್ವತ್‌ಪೂರ್ಣ ಗ್ರಂಥವನ್ನು ರಚಿಸಲು ಸಾಧ್ಯವಾಯಿತು.

'ವಿಶ್ವಬಂಧು ಬಸವಣ್ಣ' ಗ್ರಂಥದ ಮುನ್ನುಡಿಯಲ್ಲಿ ಅ.ನ.ಕೃ. ಅವರು ಹೀಗೆ ಅಭಿಪ್ರಾಯ ಪಟ್ಟಿದ್ದಾರೆ. "ವೀರಶೈವ ಧರ್ಮೋದ್ಧಾರಕರಾದ ಶ್ರೀ ಬಸವಣ್ಣನವರು ವೀರಶೈವರಿಗೆ ಮಾತ್ರವಲ್ಲದೆ ಎಲ್ಲ ಕನ್ನಡಿಗರಿಗೂ, ಎಲ್ಲ ಸಾಧಕರಿಗೂ ಪ್ರಿಯರಾಗಿದ್ದಾರೆ. ಏಕ ನಿಷ್ಠೆಯಿಂದ ಅವರು ಜ್ಞಾನ, ಭಕ್ತಿ, ಕರ್ಮ ಮಾರ್ಗದಲ್ಲಿ ಮುನ್ನಡೆದು ಜೀವನ್ಮುಕ್ತಿಯನ್ನು ದೊರಕಿಸಿಕೊಂಡ ಬಗೆ ಅಪೂರ್ವವಾದುದಾಗಿದೆ. ಧರ್ಮ ಪ್ರಚಾರಕರಾಗಿ, ರಾಜಕಾರಣಿಗಳಾಗಿ, ನೂತನ ಸಮಾಜ ಸ್ಥಾಪಕರಾಗಿ, ಸಾಹಿತಿಯಾಗಿ ಬಸವಣ್ಣನವರು ನಾಡಿಗೆ ಬಹುಮುಖ ಸೇವೆ ಸಲ್ಲಿಸಿದ್ದಾರೆ. ಅವರ ಅನ್ಯಾದೃಶ ಜೀವನದ ಕೆಲವು ಮುಖಗಳನ್ನು 'ವಿಶ್ವಬಂಧು ಬಸವೇಶ್ವರ' ಪರಿಚಯ ಮಾಡಿಕೊಡುತ್ತದೆ.

'ಜಾತಿಹೀನನ ಮನೆಯ ಜ್ಯೋತಿ ತಾ ಹೀನವೆ?' ಎಂಬ ಮಾತಿನಲ್ಲಿ ಅಚಲ ನಂಬಿಕೆಯನ್ನಿಟ್ಟಿದ್ದ ಅ.ನ.ಕೃ. 'ಜಗಜ್ಯೋತಿ ಬಸವೇಶ್ವರ' (೧೯೩೭) ನಾಟಕ ಬರೆದರು. ಅ.ನ.ಕೃ. ಅವರು ಸ್ವತಃ ನಟರಾಗಿದ್ದರು. ಆಗಿನ ಕಾಲದ ನಟರಾಗಿದ್ದ ಟೈಗರ್ ವರದಾಚಾರ್ಯರು, ಬಳ್ಳಾರಿ ರಾಘವ, ಕೈಲಾಸಂ ಮುಂತಾದವರ ನಿಕಟ ಸಂಪರ್ಕವಿದ್ದದರಿಂದ ರಂಗತಂತ್ರವನ್ನು ಬಲ್ಲವರಾಗಿದ್ದರು. ಅವರ ಈ ನಾಟಕ ಶರಣ ಪವಾಡಗಳ ಪ್ರದರ್ಶನ ಎಂದೇ ಬಗೆದಿದ್ದ ಆಗಿನ ಕಾಲದಲ್ಲಿ ಅವರ ಪವಾಡಗಳಿಗೆ ಗೌಣಸ್ಥಾನವನ್ನು ಕೊಟ್ಟು ಅವರ ಮಾನವೀಯ ಮತ್ತು ಸಾಮಾಜಿಕ ದೃಷ್ಟಿಗೇ ಹೆಚ್ಚು ಒತ್ತು ಕೊಟ್ಟು ರಚಿಸಿದ ನಾಟಕವಿದು. ಈ ನಾಟಕವನ್ನು ಪ್ರದರ್ಶಿಸುವುದರಿಂದ ಬಸವಣ್ಣನವರ ಸಂದೇಶವನ್ನು

ಪರಿಣಾಮಕಾರಿಯಾಗಿ ಜನತೆಗೆ ಮುಟ್ಟಿಸುವುದು ಸುಲಭ ಎಂಬ ಅರಿವಿತ್ತು.

'ಬಸವಣ್ಣನವರ ಅಮೃತವಾಣಿ' ಅ.ನ.ಕೃ. ಶರಣ ಸಾಹಿತ್ಯಕ್ಕೆ ನೀಡಿದ ಅಮೂಲ್ಯ ಕೊಡುಗೆ. ಅದು ಬಸವಣ್ಣನವರ ಜೀವನ ಚರಿತ್ರೆ. ಆ ಕಾಲದಲ್ಲಿ ಲೋಕಾರ್ಪಣೆಗೊಂಡ ಒಂದು ಅತ್ಯುತ್ತಮ ಜೀವನಗಾಥಾ. ಈ ಕೃತಿಯ ಮಹತ್ವವನ್ನು ಕುರಿತು ಪ್ರೊ. ಶಿ.ಶಿ. ಬಸವನಾಳರು ಹೀಗೆ ಪ್ರಶಂಸಿಸಿದ್ದಾರೆ.

'ಶ್ರೀ ಅ.ನ. ಕೃಷ್ಣರಾಯರು ವೀರಶೈವರಲ್ಲಿ ತುಂಬಾ ಶ್ರದ್ಧೆಯುಳ್ಳವರಾಗಿದ್ದಾರೆ. ವೀರಶೈವ ಧರ್ಮ ಜಗತ್ತಿನ ಧರ್ಮ, ಶಿವಶರಣರು ಜಗದ್ವಂದ್ವರು ಎಂಬ ವಿಶಾಲ ಭಾವನೆಯನ್ನು ತಳೆದಿದ್ದಾರೆ. ವಚನ ಶಾಸ್ತ್ರವನ್ನು ಬಹುವಾಗಿ ಮೆಚ್ಚಿದ್ದಾರೆ. ವೀರಶೈವ ಮಹಾಪುರುಷರಲ್ಲಿ ಅಗ್ರಗಣ್ಯರಾದ ಬಸವಣ್ಣನವರನ್ನು ಅವರ ಬುದ್ಧಿಯಿಂದ ಕಂಡಿದ್ದಾರೆ. ಬಸವಣ್ಣನವರ ವಚನಗಳಿಗೆ ಮನಸೋತು ಅವರನ್ನು ತಮ್ಮ 'ಕನ್ನಡ ಗುರು'ಗಳೆಂದು ಕರೆದಿದ್ದಾರೆ. ಇದೀಗ ತಮ್ಮ ಅಭ್ಯಾಸ, ಅನುಭವಗಳ ಫಲವಾಗಿ ಬಸವಣ್ಣನವರ ಜೀವನ ಸಂದೇಶ ಇವುಗಳನ್ನು ಕುರಿತು 'ಬಸವಣ್ಣನವರ ಅಮೃತವಾಣಿ' ಎಂಬ ಪುಸ್ತಕದಿಂದ ಪ್ರಕಟಗೊಳಿಸಿದ್ದಾರೆ.' ಪ್ರೊ. ಶಿ.ಶಿ. ಬಸವನಾಳರ ಒಂದೊಂದು ನುಡಿಗಳೂ ಅ.ನ.ಕೃ. ಅವರಿಗೆ ವಚನ ಸಾಹಿತ್ಯದ ಬಗೆಗಿನ ಶ್ರದ್ಧೆ, ಗೌರವ, ಅಭಿಮಾನವನ್ನು ಸೂಚಿಸುತ್ತದೆ.

**ಕೃತಿಗಳು** : 'ಮದುವೆಯೋ ಮನೆಹಾಳೋ, ಜೀವನ ಯಾತ್ರೆ, ಸಂಧ್ಯಾರಾಗ, ಮಂಗಳಸೂತ್ರ, ನಟಸಾರ್ವಭೌಮ, ಗೃಹಲಕ್ಷ್ಮೀ, ನಗ್ನಸತ್ಯ, ಶನಿ ಸಂತಾನ, ಸಂಜೆಗತ್ತಲು, ಬೆಂಗಳೂರು ಕೆಂಪೇಗೌಡ, ಉದಯರಾಗ, ಕಿತ್ತೂರು ಚೆನ್ನಮ್ಮ, ರುಕ್ಮಿಣಿ, ತಾಯಿಕರಳು, ಅಗ್ನಿಕನ್ಯೆ, ಕಾಮಸೋಲು, ಕನ್ನಡ ಕುಲ ರಸಿಕರು, ಕರ್ನಾಟಕ ಕಲಾವಿದರು, ಕೈಲಾಸಂ, ನನ್ನನ್ನು ನಾನೇ ಕಂಡೆ, ಬರಹಗಾರನ ಬದುಕು, ಗಾಂಧೀ, ವಿವೇಕಾನಂದ, ಬಸವೇಶ್ವರ, ಕಬೀರ, ನಾಟಕ ಕಲೆ, ಸಜೀವ ಸಾಹಿತ್ಯ, ಸಂಸ್ಕೃತಿಯ ವಿಶ್ವರೂಪ, ಸಾಹಿತ್ಯ ಮತ್ತು ಜೀವನ, ಸಾಹಿತ್ಯ ಮತ್ತು ಜೀವನ, ಸಾಹಿತ್ಯ ಮತ್ತು ಯುಗ ಧರ್ಮ, ಕನ್ನಡ ದಾರಿ, ಅಖಂಡ ಕರ್ನಾಟಕ, ವೀರಶೈವ ಮತ್ತು ಸಂಸ್ಕೃತಿ, ಚಿತ್ರಕಲೆ, ಕರ್ನಾಟಕದ ಹಿತಚಿಂತನೆ, ಬಳ್ಳಾರಿ ಸಮಸ್ಯೆ, ಭಾರತೀಯ ಚಿತ್ರಕಲೆಯಲ್ಲಿ ರಾಜಾ ರವಿವರ್ಮನ ಸ್ಥಾನ, ಬಸವಣ್ಣನವರ ಅಮೃತವಾಣಿ, ಭಾರತದ ಕಥೆ, ಗಾರ್ಕಿಯ ಕಥೆಗಳು, ಭಾರತೀಯ ಕಲಾದರ್ಶನ, ಭಾರತೀಯ ಸಂಸ್ಕೃತಿ ದರ್ಶನ ಇತ್ಯಾದಿ.

**ಗೌರವ ಪ್ರಶಸ್ತಿಗಳು** : ಅ.ನ. ಕೃಷ್ಣರಾಯರು ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಅಮೂಲ್ಯ ಕೊಡುಗೆಯನ್ನು ಮನಗೊಂಡ ಕನ್ನಡ ಸಾಹಿತ್ಯ ಪರಿಷತ್ತು ೧೯೬೦ ರಲ್ಲಿ ಮಣಿಪಾಲದಲ್ಲಿ ನಡೆದ ೪೨ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡುವುದರ ಮೂಲಕ ಗೌರವ ಸಲ್ಲಿಸಿತು. ೧೯೭೦ ರಲ್ಲಿ ಮೈಸೂರು ವಿಶ್ವವಿದ್ಯಾಲಯ ಗೌರವ ಡಿ.ಲಿಟ್ ಪದವಿ ನೀಡಿ ಗೌರವಿಸಿದರೆ, ಗೋವಾ ಕನ್ನಡ ಸಂಘದವರು 'ರಸಚೇತನ' ಗೌರವ ಅಭಿನಂದನಾ ಗ್ರಂಥವನ್ನು ಅರ್ಪಿಸುವುದರ ಮೂಲಕ ಅವರು ಕನ್ನಡ ನಾಡು ನುಡಿಗಾಗಿ ಸಲ್ಲಿಸಿದ ಅನುಪಮ ಸೇವೆಗೆ ಗೌರವದ ಬಾಗಿನ ಅರ್ಪಿಸಿದ್ದಾರೆ.

"ಅನಕೃ ಅವರು ಶರಣ ಸಾಹಿತ್ಯ ರಚಿಸಿ ಮಾಡಿದ ಅಮೋಘ ಸೇವೆ ಸ್ಮರಣೀಯವೆ, ಆದರೆ ಅವರು ಅದಕ್ಕಿಂತಲೂ ಘನವಾದ ಸೇವೆಯನ್ನು ಶರಣ ಸಾಹಿತ್ಯಕ್ಕೆ ಮಾಡಿದರು. ಅದು ಅವರ ಅನುಕರಣೀಯ ಅದ್ಭುತವಾದ ವಾಗ್ವೈಖರಿಯಿಂದ. ಅನಕೃ ಅವರ ಭಾಷಣವನ್ನು ಕೇಳಿಲ್ಲದ ಈಗಿನ ಪೀಳಿಗೆ ಅವರ ಮಾತಿನ ಮೋಡಿಯನ್ನು ಊಹಿಸಲಾರರು. ದೈವದತ್ತವಾದ ಆಕರ್ಷಕ ರೂಪ, ಅವರ ಧ್ವನಿಯೂ ಕಿವಿಗೆ ಅಪ್ಯಾಯಮಾನ. ಅಭಿನಯ ಕಲೆಯೂ ಕರಗತವಾಗಿದ್ದ ಅವರು ಸಂದರ್ಭ, ಸನ್ನಿವೇಶ, ಭಾಷಣದ ವಿಷಯಕ್ಕೆ ತಕ್ಕಂತೆ ನಿರರ್ಗಳವಾಗಿ, ಶಬ್ದಗಳಿಗೆ ತಡಕಾಡದೆ ವಿಷಯ ನಿರೂಪಣೆಯ ಸಾಮರ್ಥ್ಯ ಈ ಗುಣಗಳನ್ನೆಲ್ಲ ಅನಕೃ, ಕನ್ನಡ ನಾಡಿನ ಉದ್ದಗಲದಲ್ಲೆಲ್ಲ, ಒಮ್ಮೊಮ್ಮೆ ಹೊರನಾಡಿನಲ್ಲೂ ಸಂಚರಿಸಿ ಕನ್ನಡ ಭಾಷೆ, ಸಂಸ್ಕೃತಿ, ಸಾಹಿತ್ಯ, ಕಲೆ, ಕರ್ನಾಟಕ ಏಕೀಕರಣ, ಶರಣ ಸಾಹಿತ್ಯದ ಹಿರಿಮೆಯನ್ನು ಸಾರಲಿಕ್ಕಾಗಿ ಧಾರೆಯರೆದರು. ಅವರು ನಾಡಿನಾದ್ಯಂತ ಕರೆದಲ್ಲಿಗೆ ಮೂಲೆ ಮೂಲೆಗೆ ಹೋಗಿ ಬಸವ ಜಯಂತಿಯಲ್ಲಿ, ಇತರ ಉತ್ಸವಗಳಲ್ಲಿ, ನಾಡ ಹಬ್ಬಗಳಲ್ಲಿ ಭಾಷಣ ಮಾಡಿ ಶರಣ ಸಾಹಿತ್ಯ-ತತ್ರಾಪಿ ಬಸವಣ್ಣನವರ ಸಂದೇಶವನ್ನು ಸಾರಿದರು. ಅಷ್ಟು ಪ್ರಯಾಣ ಮಾಡುವ ದೈಹಿಕ ಶ್ರಮವನ್ನು, ಅನಾನುಕೂಲತೆಗಳನ್ನು ಅವರು ಹೇಗೆ ಸಹಿಸಿಕೊಂಡರೋ ನನಗೀಗ ಆಶ್ಚರ್ಯವಾಗುತ್ತದೆ. ಅವರು ಶರಣ ಸಾಹಿತ್ಯ ಮತ್ತು ವಚನ ಸಾಹಿತ್ಯಕ್ಕೆ ಅಂದು ಮಾಡಿದ ಸೇವೆಯ ನಿಮಿತ್ತ ಬರಬರುತ್ತಾ ವಿದ್ವಾಂಸರ ದೃಷ್ಟಿ ಇತ್ತ ಹರಿಯಿತು. ಇಂದು ಹರಿದು ಬರುತ್ತಿರುವ ಶರಣ-ಸಂತ ಸಾಹಿತ್ಯದ ಮಹಾಪೂರಕ್ಕೆ ಅಂದು ಅನಕೃ ಮಾಡಿದ ಪ್ರಯತ್ನ ಸ್ಮರಣೀಯ" ಎಂಬ ನ್ಯಾಯಮೂರ್ತಿಗಳೂ, ವಿದ್ವಾಂಸರೂ ಆಗಿದ್ದ ಕೋ. ಚನ್ನಬಸಪ್ಪ ಅವರ ಮನದಾಳದ ಮಾತುಗಳು ಅ.ನ.ಕೃ ಅವರ ಘನವ್ಯಕ್ತಿತ್ವಕ್ಕೆ ಭಾಷ್ಯ ಬರೆದಂತಿವೆ.

ಅರವತ್ಮೂರು ವಸಂತಗಳ ಬೇವು ಬೆಲ್ಲವನ್ನು ಸಮಚಿತ್ತದಿಂದ ಸವಿದ ಕಾದಂಬರಿ ಸಾರ್ವಭೌಮ, ಕನ್ನಡದ ಕಣ್ಮಣಿ, ಡಾ. ಅ.ನ.ಕೃ ಅವರು ಜುಲೈ ೮, ೧೯೭೧ ರಂದು ಅಸ್ತಂಗತವಾದರು. ಸಾಧಕನಿಗೆ ಸಾವು ಅಂತ್ಯವಲ್ಲ. ಸಾವಿನ ನಂತರವೂ ಬದುಕುತ್ತಾರೆ ಎಂಬ ವಿವೇಕಾನಂದರ ಮಾತು ಅಕ್ಷರಶಃ ಸತ್ಯ. ಅನಕೃ ಅವರು ನಾಡು-ನುಡಿಗಾಗಿ ಸಲ್ಲಿಸಿದ ಅನುಪಮ ಸೇವೆಯಿಂದ ಜನರ ಹೃದಯದಲ್ಲಿ ವಿಶೇಷ ಸ್ಥಾನ ಪಡೆದುಕೊಳ್ಳುವುದರ ಮೂಲಕ ಬದುಕಿದ್ದಾರೆ. ■



ಲೇಖನ

# ಭಾರತೀಯ ಭಕ್ತಿ ಪರಂಪರೆಯ ಭಿನ್ನ ಧ್ವನಿ : 'ವಚನ ಚಳುವಳಿ'

- ಡಾ. ಜಿ.ಎನ್. ಉಪಾಧ್ಯ
ವಿದ್ವಾಂಸರು, ಮುಂಬಾಯಿ

ಭಾರತೀಯ ಭಕ್ತಿ ಪರಂಪರೆಗೆ ಸುದೀರ್ಘವಾದ ಇತಿಹಾಸವಿದೆ. ನಮ್ಮ ದೇಶದ ಪ್ರಾಚೀನ ಸಂಸ್ಕೃತಿಯ ತೊಟ್ಟಿಲುಗಳಾದ ಹರಪ್ಪ ಮೊಹೆಂಜೊದಾರೊಗಳಲ್ಲಿ ದೊರೆತ ಅವಶೇಷಗಳಲ್ಲಿ ಶಿವನ ಉಪಾಸನೆಗೆ ಸಂಬಂಧಿಸಿದಂತೆ ಸಮೃದ್ಧ ಮಾಹಿತಿ ಲಭ್ಯವಾಗಿದೆ. ಅವರ ಆರಾಧ್ಯದೈವ ಪಶುಪತಿ; ರುದ್ರನಾಗಿದ್ದ. ಅಲ್ಲಿನ ಜನರು ಲಿಂಗರೂಪಿ ಭಗವಂತನ ಪೂಜೆ ಪುನಸ್ಕಾರದಲ್ಲಿ ನಿರತರಾಗಿದ್ದರೆಂಬುದು ಪ್ರಾಚ್ಯ ಅವಶೇಷಗಳಿಂದ ತಿಳಿದುಬರುತ್ತದೆ. ವೇದಕಾಲಕ್ಕಿಂತ ಹಿಂದಿದ್ದ ದ್ರಾವಿಡ ಸಂಸ್ಕೃತಿಯಲ್ಲಿಯೂ ಭಕ್ತಿಗೆ ಅಗ್ರಸ್ಥಾನವಿತ್ತೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಆರಂಭದ ವೈದಿಕ ಸಾಹಿತ್ಯದಲ್ಲಿ ಭಕ್ತಿಗೆ ಅಷ್ಟಾಗಿ ಮಹತ್ವವಿರಲಿಲ್ಲ. ವೇದಗಳು ಕರ್ಮಕ್ಕೆ ಪ್ರಾಧಾನ್ಯ ನೀಡಿದವು. ಉಪನಿಷತ್ಕಾಲಕ್ಕೆ ಜ್ಞಾನಕ್ಕೆ ಒತ್ತು ನೀಡಲಾಯಿತು. ಯಜ್ಞಯಾಗಾದಿಗಳಿಗೆ ಮಹತ್ವಕೊಟ್ಟ ಆರ್ಯರು ಕ್ರಮೇಣ ಭಕ್ತಿಯನ್ನು ಸ್ವೀಕಾರ ಮಾಡಿದರು. ಹೀಗಾಗಿ ಭಗವದ್ಗೀತೆಯಲ್ಲಿ ಭಕ್ತಿಗೆ ಅದ್ಯತೆ ಸಿಕ್ಕಿತು. 'ಸ್ವಾರ್ಥವನ್ನು ಬದಿಗೊತ್ತಿ ತನ್ನನ್ನು ತಾನು ಮರೆಯುವಂಥ ಅಚಲ ಪ್ರೇಮವೇ ಭಕ್ತಿ' ಎಂದು ಭಾಗವತದಲ್ಲಿ ಹೇಳಲಾಗಿದೆ. ರಾಮಾಯಣ ಮಹಾಕಾವ್ಯದಲ್ಲಿ 'ಉತ್ಕೃಷ್ಟವಾದ ಪ್ರೀತಿಯೇ ಭಕ್ತಿ' ಎಂದು ಸಾರಲಾಗಿದೆ. ನಾರದ ಭಕ್ತಿಸೂತ್ರದಲ್ಲಿ 'ಅಮೃತ ಸ್ವರೂಪನಾದ ಭಗವಂತನಲ್ಲಿ ಉತ್ಕಟವಾದ ಪ್ರೇಮವೇ ಭಕ್ತಿ' ಎಂದು ಬಣ್ಣಿಸಲಾಗಿದೆ. ಪರಮಾತ್ಮನಲ್ಲಿ ಮನಸ್ಸು ಸ್ಥಿರಗೊಳಿಸಿವುದಕ್ಕೆ ಏಕಾಗ್ರತೆ ಅಗತ್ಯ. ಈ ಏಕಾಗ್ರತೆ ಎಂಬುದು ಅಭ್ಯಾಸದಿಂದ ಸಿದ್ಧಿಸುತ್ತದೆ. ಅಭ್ಯಾಸಕ್ಕೆ ಜ್ಞಾನ, ಅದಕ್ಕೆ ಧ್ಯಾನ ಮತ್ತು ಕರ್ಮಫಲ ತ್ಯಾಗ ರೂಪವಾದ ಭಕ್ತಿ ಕಾರಣ. ಭಕ್ತಿಯಿಂದ ನೆಮ್ಮದಿ ಶಾಂತಿ ಸಿಗುತ್ತದೆ ಎಂದು ಭಗವದ್ಗೀತೆಯಲ್ಲಿ ಹೇಳಲಾಗಿದೆ.

ಮುಖ್ಯವಾಗಿ 'ಭಕ್ತಿ' ಆಗಮ ಸಂಸ್ಕೃತಿಯಿಂದ ಹುಟ್ಟಿಕೊಂಡಿತೆಂದು ಹೇಳಲಾಗುತ್ತದೆ. ಸಾಕ್ಷಾತ್ ಶಿವನೇ ನಿರೂಪಿಸಿದ ಎಂದು ನಂಬಲಾಗುವ ಆಗಮಗಳ ಬಗೆಗೂ ಸಾಕಷ್ಟು ಚಿಂತನೆ ನಡೆದಿದೆ. ಶಿವ ಅನಾದಿ, ಅನಂತ, ಸರ್ವಜ್ಞ, ಸರ್ವಶಕ್ತ ಎಂದೂ ಹೇಳಲಾಗಿದೆ. ಶೈವ ಧರ್ಮದಲ್ಲಿ ಕ್ರಮೇಣ ಕಾಶ್ಮೀರಶೈವ, ತಮಿಳುಶೈವ, ವೀರಶೈವ ಮೊದಲಾದ ಶಾಖೆಗಳು ಹುಟ್ಟಿಕೊಂಡವು. ತಮಿಳುಶೈವ ಶಾಖೆಗೆ ಸಾಕಷ್ಟು ಹಿನ್ನೆಲೆಯಿದೆ. "ದಕ್ಷಿಣ ಭಾರತದಲ್ಲಿ ಶೈವ ಧರ್ಮಕ್ಕೆ ಸಂಬಂಧಿಸಿದಂತೆ ಒಂದು ಮಹಾಕ್ಷೋಭೆಯೇ ಉಂಟಾಯಿತು. ಇದಕ್ಕೆ ಮುಖ್ಯವಾಗಿ ನಾಯನಾರರೆಂಬ ಶೈವಸಂತರು ತಮಿಳು ಭಾಷೆಯಲ್ಲಿ ಬರೆದ ಭಕ್ತಿಗೀತೆಗಳೇ ಕಾರಣ. ಈ ಗೀತೆಗಳನ್ನು ಹನ್ನೊಂದು ಸಂಕಲನಗಳಾಗಿ ವಿಭಾಗಿಸಲಾಗಿದೆ. ಇವು 'ಪೆರಿಯ ಪುರಾಣಂ' ಎಂಬ ಹೆಸರಿನ ತಮಿಳು ಪುರಾಣದೊಂದಿಗೆ ಸೇರಿ ನಂತರ ಪವಿತ್ರ ಸಾಹಿತ್ಯವಾಗಿ (ಧರ್ಮಗ್ರಂಥವಾಗಿ) ಶೈವಧರ್ಮದ ಅಡಿಪಾಯವನ್ನು ಸ್ಥಾಪಿಸಿವೆ. 'ದೇವಾರಂ' ಎಂಬ ಹೆಸರಿನ ಮೊದಲ ಏಳು ಸಂಕಲನಗಳನ್ನು ಸಂಬಂಧರ್ ಹಾಗೂ ಅವನ ಹಳೆಯ ಸಮಕಾಲೀನರಾದ ಅಪ್ಪರ್ ಮತ್ತು ಸುಂದರರ್ ಎಂಬ ಸಂತರು ರಚಿಸಿದರು. ಇವರೆಲ್ಲರೂ ಜೀವಿಸಿದ್ದು ಕ್ರಿ.ಶ. ಏಳನೆಯ ಶತಮಾನದಲ್ಲಿ ಅಥವಾ ಅದಕ್ಕಿಂತ ಸ್ವಲ್ಪ ಆನಂತರದ ಕಾಲದಲ್ಲಿ. 'ದೇವಾರಂ'ಗಳನ್ನು ವೇದಗಳಿಗೆ ಸರಿಸಮವಾಗಿ ಭಾವಿಸಲಾಗಿದೆ" ಎಂಬ ಮಾತು ನಿಜವಾದರೂ ತಮಿಳುಶೈವ ಶಾಖೆಯಲ್ಲಿ ಭಕ್ತಿಗೆ ವಿಶೇಷ ಒತ್ತು ನೀಡಿದ್ದನ್ನು ಕಾಣಬಹುದು. ವೈದಿಕ ವಿರೋಧಿ ನಿಲುವು ಅಲ್ಲಿ ಸ್ವಲ್ಪಮಟ್ಟಿಗೆ ಕಂಡುಬರುತ್ತದೆ.

ತಮಿಳುಶೈವ ಸಿದ್ಧಾಂತಕ್ಕೆ ಸುದೀರ್ಘವಾದ ಇತಿಹಾಸವಿದೆ. ಈ ಸಿದ್ಧಾಂತ ಕ್ರಿ.ಶ. ೮ನೆಯ ಶತಮಾನದಿಂದ ೧೩ನೆಯ ಶತಮಾನದವರೆಗೆ ಸಾಕಷ್ಟು ಪ್ರಭಾವಶಾಲಿಯಾಗಿತ್ತು. ದಕ್ಷಿಣದಲ್ಲಿ ಶಿವನ ಉಪಾಸಕರು ನಾಯನಾರರು. ನಾಯನಾರರು ಶಿವನ ಉಗ್ರಭಯಂಕರ ರೂಪವನ್ನು ಕಳೆದು ಪ್ರಸನ್ನನಾದ ಶಾಂತಿರೂಪನಾದ ಕರುಣಾಶಾಲಿಯಾದ ಶಿವನ ಆರಾಧನೆಯನ್ನು ಚಾಲ್ತಿಗೆ ತಂದರು. ಈ ಶಿವಭಕ್ತರ ಸಾಹಿತ್ಯ 'ತೇವಾರಂ' ಎಂದೇ ಜನಪ್ರಿಯವಾಯಿತು. ತಮಿಳುಶೈವ ಪರಂಪರೆಯ ಪ್ರಭಾವ ಕರ್ನಾಟಕದ ಮೇಲೂ ಆಯಿತು. ಅಲ್ಲಿನ ಅರವತ್ತಮೂರು ಮಂದಿ ಪುರಾತನರು ಇಲ್ಲಿಯೂ ಪೂಜ್ಯನೀಯರಾದರು. 'ವೀರಶೈವ ಧರ್ಮವು ಅನೇಕ ಅಂಶಗಳಲ್ಲಿ ತಮಿಳುಶೈವ ಸಿದ್ಧಾಂತವನ್ನೇ ಹೋಲುತ್ತದಾದರೂ ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರ ಈ ಮೊದಲಾದ ಕೆಲವು ವಿಶಿಷ್ಟ ಅಂಶಗಳಿಂದ ತನ್ನದೇ ಆದ ಆಚರಣೆಯ ಮಾರ್ಗವನ್ನು ಕಂಡುಕೊಂಡಿದೆ' ಎಂಬುದಾಗಿ ತಿಪ್ಪೇರುದ್ರಸ್ವಾಮಿ ಅವರು ಅಭಿಪ್ರಾಯಪಟ್ಟಿದ್ದಾರೆ. ೧೨ನೆಯ ಶತಮಾನದ ಆರಂಭದಲ್ಲಿ ಬಸವಣ್ಣನ ನೇತೃತ್ವದಲ್ಲಿ ನಡೆದ ಕ್ರಾಂತಿಯಿಂದಾಗಿ ಇಲ್ಲಿನ ಇನ್ನಿತರ ಶೈವ ಸಂಪ್ರದಾಯಗಳು ವೀರಶೈವದಲ್ಲಿ ಧ್ರುವೀಕರಣ ಗೊಂಡವು. ಹೀಗಾಗಿ ಸರ್ವಶ್ರುತಿ ಸಮನ್ವಯ ಮಾರ್ಗವಾದ ವೀರಶೈವ ಆಂದೋಲನ ಬಹುಬೇಗ ಜನಪ್ರಿಯವಾಯಿತು.

**ಸಾಂಘಿಕ ಹೋರಾಟ** : ಶಿವಶರಣರದು ಸಾಮಾಜೋ ಧಾರ್ಮಿಕ ಆಂದೋಲನ. 'ಧರ್ಮ' ಎಂಬ ಪದಕ್ಕೆ ಅವರು ಹೊಸ ಅರ್ಥವನ್ನು ತಂದುಕೊಟ್ಟರು. ಅಲ್ಲಿ 'ದಯೆಯೇ ಧರ್ಮದ ಮೂಲ'ವಾಯಿತು. 'ದಯಬೇಕು ಸಕಲ ಪ್ರಾಣಿಗಳಲ್ಲಿ' ಎನ್ನುತ್ತಾ

ಭೂತದಯೆಯನ್ನು ಶರಣರು ಎತ್ತಿಹಿಡಿದರು. ಅವರು ಧಾರ್ಮಿಕ ಚೌಕಟ್ಟನೊಳಗಿದ್ದು ಕೊಂಡು ಸಮಾಜ ಸುಧಾರಣೆಗೆ ಧುಮುಕಿದರು. ಧರ್ಮದ ಮೂಲಕ ಮಾನವೀಯತೆಯನ್ನು ಬಿತ್ತಿ ಬೆಳೆದರು. ಸಾಹಿತ್ಯ ರಚನೆ ಶಿವಶರಣರ ಮುಖ್ಯ ಉದ್ದೇಶವಾಗಿರಲಿಲ್ಲ. ಜನಜಾಗೃತಿಗಾಗಿ ಅವರು ಸಾಹಿತ್ಯವನ್ನು ತಮ್ಮ ಕ್ರಾಂತಿಯ ಪಥವಾಗಿ ಮಾಡಿಕೊಂಡರು. ತಮಗೆ ಕಂಡದ್ದನ್ನು ಧೈರ್ಯವಾಗಿ ಜನರ ಆಡುನುಡಿಯಲ್ಲಿ ಹೇಳಿದರು. ದೇವರೊಂದಿಗೂ ಕನ್ನಡದಲ್ಲೇ ಸಂಭಾಷಣೆ ನಡೆಸಿದರು. ಕನ್ನಡ ನುಡಿಯನ್ನು ಈ ಮೂಲಕ ದೇವವಾಣಿಯ ದರ್ಜೆಗೇರಿಸಿದರು. "ವಚನ ಸಾಹಿತ್ಯ ಎರವಲು ತಂದದ್ದಲ್ಲ. ಅದು ಕನ್ನಡದ ಸ್ವಾರ್ಜಿತ ಸ್ವತ್ತು. ವಚನಕಾರರು ಸಂಸ್ಕೃತದ ಆಚಾರ್ಯರಲ್ಲ. ಅವರು ಅಚ್ಚಗನ್ನಡದ ಬೇಸಾಯಗಾರರು" ಎಂಬ ಎಂ.ಆರ್.ಶ್ರೀ. ಅವರ ಮಾತು ಸತ್ಯಸ್ಯ ಸತ್ಯ. ಬದುಕು ಸಹ್ಯವಾಗಲು, ಸಮಾಜ ಸುಧಾರಣೆಗೆ ಏನೆಲ್ಲ ಆಗಬೇಕೋ ಅದೆಲ್ಲವನ್ನು ಶರಣರು ಆಂದೋಲನದ ರೀತಿಯಲ್ಲಿ ಒಗ್ಗಟ್ಟಿನಿಂದ ಮಾಡಿದರು. ಹೀಗಾಗಿ "ಶಿವಶರಣರು ಹುಟ್ಟು ಹಾಕಿದ ಚಳುವಳಿ ದಲಿತ ದುರ್ಬಲರ ಕ್ರಾಂತಿಯಾಯಿತು. ಅಬಲೆಯರ ಕ್ರಾಂತಿಯಾಯಿತು. ಕಾಯಕ ಪರಿಣಾಮಿಗಳ ಕ್ರಾಂತಿಯಾಯಿತು. ದಾಸೋಹಿಗಳ ಕ್ರಾಂತಿಯಾಯಿತು. ಈ ಕ್ರಾಂತಿಯ ಬೆಳಗು, ತಪ್ಪುಗಳ ಕತ್ತಲೆಯನ್ನು ತಕ್ಕಮಟ್ಟಿಗೆ ಹರಿಯಲು ಕಾರಣವಾಯಿತು" (ಡಾ. ಎಸ್.ಎಂ. ಹಿರೇಮಠ, ೧೯೯೫, ಪುಟ ೧೧). ವಾಸ್ತವ ಬದುಕಿನ ನಿಜದ ನೆಲೆಗಳನ್ನು ಶರಣರು ತೆರೆದು ತೋರಿದರು. ಇದರಿಂದ ಹೊಸ ಬಗೆಯ ವಿಚಾರವಾದ ತಲೆ ಎತ್ತಿತ್ತು. ಎಲ್ಲವನ್ನೂ ಪ್ರಶ್ನಿಸುವ, ವಿಚಾರಿಸುವ ಧೈರ್ಯ, ಸಾಮರ್ಥ್ಯ ಬಂದಿತು. ವಚನಕಾರರು ಸಂಪ್ರದಾಯಕ್ಕಿಂತ ಅನುಭವ ಜ್ಞಾನಕ್ಕೆ ಹೆಚ್ಚು ಮಹತ್ವ ನೀಡಿದರು.

ಹತ್ತರಿಂದ ಹದಿನಾರು ಹದಿನೇಳನೆಯ ಶತಮಾನದವರೆಗೂ ಭಾರತದ ವಿವಿಧ ಪ್ರಾಂತಗಳಲ್ಲಿ ಭಕ್ತಿ ಚಳುವಳಿ ನಡೆಯಿತು. ಆದರೆ ಕನ್ನಡದ ನೆಲದಲ್ಲಿ ನಡೆದಷ್ಟು ವೈವಿಧ್ಯಮಯವಾದ, ಕ್ರಾಂತಿಕಾರಿಯಾದ ಕಾರ್ಯ ಬೇರೆಲ್ಲೂ ನಡೆದಿಲ್ಲ. ಬಸವಣ್ಣನವರ ನೇತೃತ್ವದಲ್ಲಿ ನಡೆದ ಈ ಚಳುವಳಿಯ ಪರಿ ಭಿನ್ನವಾಗಿತ್ತು. ಬಸವಣ್ಣನ ದೆಸೆಯಿಂದ ಕಲ್ಯಾಣದಲ್ಲಿ ವಚನಧರ್ಮ ವಿಕಾಸಗೊಂಡಿತು. ಅಲ್ಲಿಯ ಶಿವಾನುಭವ ಮಂಟಪದಲ್ಲಿ ಆತ್ಮ ಆತ್ಮ ಮಥಿಸಿ ಅನುಭಾವ ಹುಟ್ಟಿತು. ವಚನಧರ್ಮ ಪ್ರಕಾಶಿಸಿತು. ಯಾರು ಯಾರಲ್ಲಿ ವಚನಧರ್ಮ ಪ್ರೇಮ ಗುಪ್ತವಾಗಿ ಸುಪ್ತವಾಗಿ ಇದ್ದಿತೋ ಅದೆಲ್ಲವೂ ಚೇತನಗೊಂಡು ಹರಿಯತೊಡಗಿತು. ಈ ಪ್ರಕಾಶ ಈ ಪ್ರವಾಹ ಕನ್ನಡ ನಾಡಿನಲ್ಲಿ ತಲೆದೋರಿದುವು. ಕನ್ನಡ ಭಾಷೆಯ ಕಿರಣಗಳಿಂದ ಕನ್ನಡ ಭಾಷಾ ವಾಹಿನಿಯಿಂದ ಬೆಳಕು ಹರಡಿತು. ಬೆಳೆ ಎದ್ದಿತು. ಸ್ವತಂತ್ರ ವಿಚಾರವಾದಿಗಳ ಇಂತಹ ದೊಡ್ಡ ಗುಂಪು ತಮಿಳುನಾಡಿನಲ್ಲಿಯಾಗಲಿ ತೆಲುಗು ನಾಡಿನಲ್ಲಾಗಲಿ ಇದಕ್ಕೆ ಹಿಂದೆ ಕಾಣಿಸಿಲ್ಲ, ಆಗಲೂ ಕಾಣಲಿಲ್ಲ. ತಮಿಳುನಾಡಿನಲ್ಲಿ ತಲೆದೋರಿದ ಶೈವಭಕ್ತಿ ಪ್ರವಾಹದ ಸ್ತೋತ್ರಗೀತೆಗಳನ್ನು ಬೆಳೆಸಿತು. ಅರವತ್ತು ಮೂರು ಪುರಾತನರ ಕಥೆಗಳನ್ನು ಅರಳಿಸಿತು. ಈ ತಮಿಳುನಾಡಿನ ಕ್ರಾಂತಿಯ ಪ್ರಭಾವವನ್ನು ವಚನಕಾರರಲ್ಲಿ ಕಾಣಬಹುದಾದರೂ ವಿಚಾರವಾದ, ಸ್ಥಾವರಲಿಂಗ ಪೂಜೆಯ ಖಂಡನೆ ಮೊದಲಾದವನ್ನು ಈ ತಮಿಳು ಕ್ರಾಂತಿಯಲ್ಲಿ ಕಾಣಲಾಗುವುದಿಲ್ಲ. ತೆಲುಗು ನಾಡಿನಲ್ಲಿ ಆರಾಧ್ಯ ಸಂಪ್ರದಾಯ ಪ್ರಬಲಿಸಿತು. ಇದರ ಪ್ರಭಾವವೂ ಕನ್ನಡ ನಾಡಿನಲ್ಲಿ ದೊಡ್ಡ ಕ್ರಾಂತಿಯುಂಟಾಯಿತು ಎಂದು ಹೇಳಬಹುದು ಎಂಬುದಾಗಿ ಎಂ.ಆರ್. ಶ್ರೀನಿವಾಸಮೂರ್ತಿ ಅವರು ತೌಲನಿಕವಾಗಿ ವಿವೇಚಿಸುತ್ತಾ ಶರಣ ಚಳುವಳಿಯ ವೈಶಿಷ್ಟ್ಯವನ್ನು ಎತ್ತಿ ಹಿಡಿದಿದ್ದಾರೆ.

೧೨ನೆಯ ಶತಮಾನದ ಸಂಕ್ರಮಣ ಕಾಲಘಟ್ಟದಲ್ಲಿ ಕನ್ನಡ ನಾಡಿನಲ್ಲಿ ವಚನ ಚಳುವಳಿ ಹೊಸ ಸಂಚಲನೆಯನ್ನುಂಟು ಮಾಡಿತು. ಶರಣರ ಆಂದೋಲನ ದಿಂದ ೧೨ನೆಯ ಶತಮಾನ 'ವಿಚಾರ ಕ್ರಾಂತಿ'ಯ ಯುಗವೆಂದೇ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಕನ್ನಡ ನಾಡಿನಲ್ಲಿ ನಡೆದ ಈ ಚಳುವಳಿಯನ್ನು ಇತಿಹಾಸಕಾರರು ಇಂದು ಗಂಭೀರವಾಗಿ ಪರಿಗಣಿಸುತ್ತಿದ್ದಾರೆ. ಪ್ರಸಿದ್ಧ ಇತಿಹಾಸಕಾರರೂ ಚಿಂತಕರೂ ಆದ ರೊಮಿಲಾ ಥಾಪರ್ ಅವರು ವಚನ ಚಳುವಳಿಯನ್ನು 'Most progressive movement in India' 'ಭಾರತದ ಪ್ರಖರವಾದ ಪ್ರಗತಿಶೀಲ ಚಳುವಳಿ' ಎಂದು ವಚನಕಾರರ ಸಾಧನೆಗಳನ್ನು ಬಣ್ಣಿಸಿದ್ದಾರೆ. ಕನ್ನಡ ವಿದ್ವಾಂಸರಾದ ಸಿ. ವೀರಣ್ಣ ಅವರು 'ಕಾಯಕ ಜೀವಿಗಳ ಚಳುವಳಿ' ಎಂಬುದಾಗಿ ಕರೆದರೆ, ಎಂ. ಚಿದಾನಂದಮೂರ್ತಿ ಅವರು ಸಾಮಾಜಿಕ ಧಾರ್ಮಿಕ ಆಂದೋಲನವೆಂದು ಕರೆದಿದ್ದಾರೆ. ನಡೆನುಡಿಯನ್ನು ಒಂದು ಮಾಡಿ ಬಹಿರಂಗ ಅಂತರಂಗಗಳ ಶುದ್ಧಿಗೆ ಯತ್ನಿಸಿದ ಶರಣರು ಜ್ಞಾನ ಮತ್ತು ಕ್ರಿಯೆಗಳನ್ನು ಒಂದುಗೂಡಿಸಿ ಕಾಯ ಮತ್ತು ಕಾಯಕಕ್ಕೆ ಹೊಸ ಅರ್ಥವನ್ನು ನೀಡಿದರು.

**'ಜ್ಞಾನದಲರಿದಡೇನಯ್ಯ ಕ್ರೀಯನಾಚರಿಸದನ್ನಕ್ಕ ?**
**ನೆನೆದ ಮಾತ್ರದಲ್ಲಿ ಅಹುದೆ, ಕಾರ್ಯದಲ್ಲಲ್ಲದೆ ?**
**ಕುರುಡ ಕಾಣ ಪಥವ, ಹೆಳವ ನಡೆಯಲರಿಯ**
**ಒಂದಿಲ್ಲದಿರ್ದಡೊಂದಾಗದು**
**ಜ್ಞಾನವಿಲ್ಲದಿರ್ದ ಕ್ರೀ ಜಡನು,**
**ಕ್ರೀಯಿಲ್ಲದ ಜ್ಞಾನವಾಗ್ಜಾಲ ಭ್ರಾಂತು**
**ಇದು ಕಾರಣ ಸಿದ್ಧಸೋಮನಾಥ ಲಿಂಗವ ಕೂಡುವ**
**ಶರಣಂಗೆ ಎರಡೂ ಬೇಕು'**

**- ಅಮುಗಿ ದೇವಯ್ಯ**

ಸಕಲ ಜೀವಾತ್ಮರಿಗೆ ಲೇಸ ಬಯಸುವ ಗುರಿಯನ್ನಿಟ್ಟುಕೊಂಡು ವಚನ ರಚನೆಗೈದ ಶರಣರ



ವಿಚಾರಧಾರೆಗಳು ಕನ್ನಡದ ಉಪನಿಷತ್ತುಗಳೆನಿಸಿದವು. "ವಚನಕಾರರು ಸ್ವತಂತ್ರ ಮತಿಗಳು, ಪ್ರಯೋಗಶೀಲರು. ಅವರ ಜೀವಿತದ ಮುಖ್ಯಗುರಿ ಆತ್ಮನಿರೀಕ್ಷಣೆ ಹಾಗೂ ಸಮಾಜ ಸುಧಾರಣೆ. ಅಂತರಂಗ ಶುದ್ಧಿಗಾಗಿ ಅವರು ಜನಸಾಮಾನ್ಯ ರೊಡನೆ ಮಾತನಾಡಿದರು. ಹಾಗೆ ಮಾತನಾಡುವಾಗ ಅವರ ಸಹಜ ನುಡಿಯೇ ಅನುಭಾವಾಭಿ ವ್ಯಕ್ತಿಯ ಮಾಧ್ಯಮ ವಾಯಿತು. ಅದು ಯಾವುದೇ ಕೃತಕ ಪ್ರಭಾವಕ್ಕೆ ಒಳಗಾಗದೇ ಇದ್ದ ರೂಪದಲ್ಲಿಯೇ ಹೊರಹೊಮ್ಮಿತು. ಅನುಭವ ತೀವ್ರತೆ ಆ ಅಭಿವ್ಯಕ್ತಿಗೆ ಕಾರಣವಾದುದರಿಂದ ಅನಿವಾರ್ಯವಾಗಿ ಒಂದು ವಿಶಿಷ್ಟರೂಪ ತನ್ನಿಂದ ತಾನೆ ಕ್ಷಣದಲ್ಲಿ ಮೈದಾಳಿತು. ಅದೇ ವಚನವೆನಿಸಿತು. ಹರಿದು ಬಂದ ಪರಂಪರೆಯ ಸತ್ವ ಬೆರೆತು, ನಿಂದ ನೆಲದ ಗುಣ ತೆರೆದು ತೋರಿದ ಉಜ್ವಲ ಪ್ರತಿಭೆ ಅದರಲ್ಲಿ ಸಂಗಮಿಸಿ ನೂತನತೆ ನಿಮಿರೆದ್ದಿತು" ಎಂಬುದಾಗಿ ವಚನ ವಾಙ್ಮಯದ ಭಿನ್ನಪರಿಯನ್ನು ವೀರಣ್ಣ ರಾಜೂರ ಅವರು (ವಚನ ಅಧ್ಯಯನ ಪುಟ ೨೩) ಸರಿಯಾಗಿಯೇ ಗುರುತಿಸಿದ್ದಾರೆ. ಭಾರತದ ಬೇರೆ ಬೇರೆ ಕಡೆಗಳಲ್ಲಿ ಮೂಡಿಬಂದ ಭಕ್ತಿ ಸಾಹಿತ್ಯಕ್ಕಿಂತ 'ವಚನವಾಙ್ಮಯ' ಹೇಗೆ ಭಿನ್ನ ಎಂಬುದನ್ನು ಹೀಗೆ ಪಟ್ಟಿ ಮಾಡಿ ಹೇಳಬಹುದಾಗಿದೆ.

* ಭಾರತದ ಇತರೆಡೆಯ ಭಕ್ತಿಪಂಥದ ಸಂತರಲ್ಲಿ, ಶರಣರಲ್ಲಿ ಅಷ್ಟಾಗಿ ಕಾಣಿಸದ ತೀವ್ರವಾದ ಸಾಮಾಜಿಕ ಚಿಂತನೆ, ಸಾಮಾಜಿಕ ನಿಲುವು ಕರ್ನಾಟಕದ ಶಿವಶರಣರ ಅನನ್ಯ ಸಾಧನೆ.
* ಜಾತಿಪಂಥದ ನಿರಾಕರಣೆ, ಜಾತಿರಹಿತ ಸಮಾಜ ನಿರ್ಮಾಣದ ಕನಸು.
* ವೈದಿಕ ವಿಚಾರಧಾರೆಯ ವಿರುದ್ಧ ತೀವ್ರವಾದ ಪ್ರತಿಭಟನೆ, ಹೋರಾಟ.
* ಸಂಕ್ರಮಣ ಕಾಲಘಟ್ಟದಲ್ಲಿ ಕನ್ನಡ ನಾಡಿನಲ್ಲಿ ಸಂಚಲನವನ್ನುಂಟು ಮಾಡಿ ಹೊಸ ಸಮಾಜದ ನಿರ್ಮಾಣದ ಕನಸು ಕಂಡದ್ದು.
* ಎಲ್ಲ ಬಗೆಯ ಪ್ರಭುತ್ವವನ್ನು ಮೀರುವ ಸಮಷ್ಟಿ ಹೋರಾಟ; ಆಂದೋಲನವನ್ನು ರೂಪಿಸಿದ್ದು.
* ಎಲ್ಲ ಬಗೆಯ ಸಮಾನತೆಯನ್ನು ಎತ್ತಿ ಹಿಡಿದು ವಿಚಾರ ಕ್ರಾಂತಿಯನ್ನು ಸಂಘಟಿಸಿದ್ದು.
* 'ಕಾಯಕ'ದ ಪರಿಕಲ್ಪನೆಯ ಮೂಲಕ ಶ್ರಮ ಸಂಸ್ಕೃತಿಯನ್ನು ಎತ್ತಿಹಿಡಿದದ್ದು (ವಚನ ಚಳುವಳಿ ಕಾಯಕ ಜೀವಿಗಳ ಹೋರಾಟದ ಕಥೆಯೂ ಆಗಿದೆ). ಕಾಯಕ ಮಾರ್ಗದಿಂದ ಗಳಿಸಿ ದಾಸೋಹ ಮಾರ್ಗದಿಂದ ವಿತರಣೆ ಮಾಡಬೇಕು ಎಂಬ ಆಶಯವನ್ನು ಶಿವಶರಣರು ಹೊಂದಿದ್ದರು.
* ಶ್ರೀಸಾಮಾನ್ಯನ ಬದುಕು ಹಸನಾಗಬೇಕೆಂಬ ಮಹದಾಶಯ ಅಲ್ಲಿತ್ತು.
* ಶರಣರು ಮನುಜ ಮತವನ್ನು ಎತ್ತಿಹಿಡಿದರು; ಅವರದು ಮಾನವ್ಯ ಧೋರಣೆ. ಮಾನವೀಯ ಕನಸುಗಳನ್ನು ಕಂಡು ನನಸಾಗಿಸಲು ಯತ್ನಿಸಿದರು.
* ಸ್ತ್ರೀಯರ ಆತ್ಮಗೌರವಕ್ಕೆ ಮಾನ್ಯತೆ ನೀಡಿ ಅವರನ್ನು ಸಮಾನವಾಗಿ ಕಂಡದ್ದು ಶರಣರ ಬಹುದೊಡ್ಡ ಸಾಧನೆ.
* ಶರಣ ಚಳುವಳಿ ಜನಪರವಾದ ಸಾಂಸ್ಕೃತಿಕ ಚಳುವಳಿಯಾಗಿತ್ತು.
* ಕನ್ನಡ ಭಾಷೆಯನ್ನು ಮಾಧ್ಯಮವಾಗಿ ಮಾಡಿಕೊಂಡು ವಿಶಿಷ್ಟ ಬಗೆಯ 'ವಚನ'ಗಳನ್ನು ರಚಿಸಿ ದೇಸಿ ಸಂಸ್ಕೃತಿಯ ಸತ್ವವನ್ನು ಎತ್ತಿಹಿಡಿದರು.
* ಇತರ ಬಗೆಯ ಸಮನ್ವಯಕ್ಕೆ ಆದ್ಯತೆ, ಉದಾ. ನುಡಿ-ನಡೆ, ಅಂತರಂಗ-ಬಹಿರಂಗ, ಇಹ-ಪರ, ಲೌಕಿಕ-ಅಲೌಕಿಕ ಮುಂತಾದ ಸಮನ್ವಯ; ಸಾಮರಸ್ಯ.
* ಅಂಧ ಶ್ರದ್ಧೆಯನ್ನು ನಿವಾರಿಸಿ ಪ್ರಗತಿಪರ ವಿಚಾರ ಧಾರೆಯನ್ನು ಶಿವಶರಣರು ಎತ್ತಿಹಿಡಿದದ್ದು.
* ಶಿವಶರಣರು ದೇವಾಲಯ ಸಂಸ್ಕೃತಿಯನ್ನು ನಿರಾಕರಿಸಿದರು. 'ದೇಹವೇ ದೇವಾಲಯ'ವಾಗಿ ಅವರಿಗೆ ಮುಖ್ಯವಾಯಿತು. ಶೈವರ ಶಿವಲಿಂಗದ ಉಪಾಸನೆಯ ಬದಲಿಗೆ 'ಇಷ್ಟಲಿಂಗ' ಉಪಾಸನೆ ವೀರಶೈವರಿಗೆ ಮುಖ್ಯವಾಯಿತು.
* ಕೆಳವರ್ಗದ ಅಥವಾ ತಳವರ್ಗದ ಜನರು ಈ ಚಳುವಳಿಯಲ್ಲಿ ದೊಡ್ಡ ಪ್ರಮಾಣದಲ್ಲಿ ಸಕ್ರಿಯವಾಗಿ ಪಾಲ್ಗೊಂಡರು.
* ಗುರುಲಿಂಗ ಜಂಗಮ ಇವರಲ್ಲಿ ಅಭೇದ ಕಲ್ಪಿಸಿದರು. ಎಲ್ಲರಿಗೂ ಏಕಪ್ರಕಾರವಾದ ಗೌರವ ಸಂದಿತು. ಸಂಸಾರದ ಬಗೆಗೆ ಗುಣಾತ್ಮಕವಾದ ನಿಲುವನ್ನ ತಳೆದರು.
* 'ಸಕಲ ಜೀವಾತ್ಮರಿಗೆ ಲೇಸ ಬಯಸುವ' ಮೂಲಕ ಉದಾರವಾದಿ ಧೋರಣೆಗೆ ಮಹತ್ವ ನೀಡಿದರು.
* ಸಂಸ್ಕೃತದ ಅಧಿಪತ್ಯವನ್ನು ನಿರಾಕರಿಸಿ ದೇಸಿ ನೆಲೆಗೆ ದನಿಕೊಟ್ಟು ಜನಪರ ಧೋರಣೆಯನ್ನು ಅಭಿವ್ಯಕ್ತಿಪಡಿಸಿದ್ದು.
* ಅತ್ತ ಗದ್ಯವೂ ಅಲ್ಲದ ಇತ್ತ ಪದ್ಯವೂ ಅಲ್ಲದ (ಗಪದ್ಯ) ಪ್ರತ್ಯೇಕವಾದ 'ವಚನ' ಪ್ರಕಾರವನ್ನು ರೂಪಿಸಿ ತಮ್ಮ ಸಾಮಾಜಿಕ ಉದ್ದೇಶಗಳಿಗೆ ಅದನ್ನು ಬಳಸಿಕೊಂಡದ್ದು ಶರಣ ಕ್ರಾಂತಿಯ ಇನ್ನೊಂದು ವೈಶಿಷ್ಟ್ಯ. ಸಾಮಾಜಿಕವಾಗಿ ನಾನಾ ರಂಗಗಳಲ್ಲಿ ಬದಲಾವಣೆ ತರುವ ಒತ್ತಡದಲ್ಲಿ, ಒತ್ತಾಸೆಯಲ್ಲಿ ಪಡಿಮೂಡಿದ್ದು ವಚನ ಸಾಹಿತ್ಯ.
* ಶಿವಶರಣರು ಹನ್ನೆರಡನೆಯ ಶತಮಾನದ ಕನ್ನಡ ನಾಡಿನ ಸಾಂಸ್ಕೃತಿಕ ಇತಿಹಾಸದಲ್ಲಿ ಉಂಟು ಮಾಡಿದ

ಸಂಚಲನವು ಮುಂದಿನ ಯುಗ ಮಾನವರಲ್ಲೂ ಪ್ರೇರಣೆ ಪ್ರಭಾವ ಬೀರುತ್ತಾ ಬಂದಿದೆ.

* ವಚನಕಾರರು ಹೇಳಿದ್ದು ದೈನಂದಿನ ಬದುಕಿನ 'ಕ್ರಿಯಾಶೀಲತೆ'. ಇದೇ ಜಂಗಮತ್ವ, ಚಲನಶೀಲ ಗುಣ.
* ನಿಜವಾಗಿಯೂ ಶರಣರ ಅಭಿವ್ಯಕ್ತಿ 'Secular' ಅಭಿವ್ಯಕ್ತಿ.
* ಆರೋಗ್ಯಪೂರ್ಣ, ಸ್ವಾಸ್ಥ್ಯ ಸಮಾಜದ ಕನಸು ಕಂಡದ್ದು, ಮಾನವನ ಘನತೆಯನ್ನು ಎತ್ತಿಹಿಡಿದು ಬಾಳ್ವೆಗೆ ಬೆಳಕಾದುದು.
* ಸಾಮೂಹಿಕ ಆಂದೋಲನದ ಮೂಲಕ ಆತ್ಮ ಕಲ್ಯಾಣ ಮತ್ತು ಲೋಕಕಲ್ಯಾಣಕ್ಕೆ ಪ್ರಾಶಸ್ತ್ಯ ನೀಡಿದ್ದು.
* ವಚನಕಾರರು ಜೀವನ ಮೌಲ್ಯಗಳಿಗೆ ಹೊಸ ಅರ್ಥವನ್ನು ತಮ್ಮ ಸ್ವಾನುಭವದ ಮೂಲಕ ಒದಗಿಸಿದರು. ಅವರು ತೋರಿದ ಜೀವನ ಪ್ರೀತಿ, ಜೀವನೋತ್ಸಾಹ ಜನಸಾಮಾನ್ಯರಿಗೆ ಒಂದು ರೀತಿಯ ಸಾಂತ್ವನವನ್ನು ಸಮಾಧಾನವನ್ನು ನೀಡಿದವು.
* ಶರಣರು ಸಮಾಜದ ನಡುವಿದ್ದು 'ಸಮಾಜ ಕೇಂದ್ರಿತವಾಗಿ' ಚಿಂತನೆ ನಡೆಸಿದರು. ಹೀಗಾಗಿ ಅವರು ಹೊಸ ಸಮಾಜದ ಹರಿಕಾರರಾದರು. ಆರ್ಥಿಕ ಸಮಾನತೆಯ ಮೂಲಕ ಸಾಮಾಜಿಕ ಸಮಾನತೆ ಸಾಧ್ಯ ಎಂದವರು ನಂಬಿಕೊಂಡಿದ್ದರು.

ಎಲ್ಲರಲ್ಲೂ ಸಮಾನವಾಗಿರುವ ಮಾನವತ್ವ ದಿಂದಾಗಿ ಎಲ್ಲ ಮನುಷ್ಯರೂ ಸಮಾನರು ಎಂಬ ಶರಣರ ಧೋರಣೆ ಇತರ ಭಕ್ತಿ ಪಂಥಗಳಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ದೇಶ, ಕಾಲ, ಮತಾತೀತವಾಗಿ ಚಿಂತಿಸಿದ ಶಿವಶರಣರ ವಿಚಾರಗಳು ಮಾನವ ಕಲ್ಯಾಣದ ದೃಷ್ಟಿಯನ್ನು ಹೊಂದಿದ್ದವು. ಇದನ್ನು ಗಮನಿಸಿ ಮಹಾತ್ಮಾ ಗಾಂಧೀಜಿ ಅವರು ಒಂದು ಕಡೆ "At such a time in the history of India, I think all of us can go back to Basava and seek guidance, inspiration and light from his Philosophy. If Basava's Philosophy is properly understood and interpreted to the common man and woman of India, it will help the country in it's onward march in search of happiness, social equality and spirituality" ಎಂದಿದ್ದಾರೆ. ಹೀಗಾಗಿ ಕರ್ನಾಟಕದ ಶರಣ ಚಳುವಳಿ ರಾಷ್ಟ್ರೀಯ ಪಾತಳಿಯಲ್ಲಿಯೂ ಮಹತ್ವ ಪಡೆದುಕೊಂಡಿದೆ.

ಉತ್ತರ ಭಾರತದಲ್ಲಿ ಕಬೀರ್, ನಾನಕ್, ದಕ್ಷಿಣ ಭಾರತದಲ್ಲಿ ಅದರಲ್ಲಿಯೂ ತಮಿಳುನಾಡಿನಲ್ಲಿ ರಾಮಾನುಜಾ ಚಾರ್ಯರು, ಮಹಾರಾಷ್ಟ್ರದ ಸಂತರು ಇವರೆಲ್ಲ ಬ್ರಾಹ್ಮಣ ವಿರೋಧಿ, ಪುರೋಹಿತಶಾಹಿ ವಿರೋಧಿ ನೆಲೆಗಳನ್ನು ಪುರಸ್ಕರಿಸಿದರು. ಇವರು ಜಾತಿ ವ್ಯವಸ್ಥೆಯನ್ನು ಬಲವಾಗಿ ಖಂಡಿಸಿದರು. ಆದರೆ ಇವರದು ವೈಯಕ್ತಿಕ ಹೋರಾಟಗಳಾಗಿದ್ದವರೇ ಹೊರತು ಕನ್ನಡ ನಾಡಿನ ಶಿವಶರಣರಂತೆ ಸಂಘಟಿತ ಆಂದೋಲನಗಳಾಗಿರಲಿಲ್ಲ. ಮಹಾರಾಷ್ಟ್ರದಲ್ಲಿ ೧೨-೧೩ನೆಯ ಶತಮಾನದಲ್ಲಿ ಜ್ಞಾನೇಶ್ವರರು ಆರಂಭಿಸಿದ ಭಕ್ತಿಪಂಥದ ಅನುಯಾಯಿ ಗಳಾದವರು ಕೆಳವರ್ಗದವರೇ ಆಗಿದ್ದರು. ನಾಮದೇವ, ಗೋರಾ, ಕುಂಬಾರ, ಏಕನಾಥ, ತುಕಾರಾಮ, ಚೋಖಾ ಮೇಳಾ, ಕಾನ್ಹೋಪಾತ್ರಾ ಮೊದಲಾದವರು ವೈದಿಕ ವಿರೋಧಿ, ಜಾತಿ ನಿರಾಕರಣೆ ಕಾರ್ಯವನ್ನು ಆರಂಭಿಸಿದರು. ಆದರೂ ಶ್ರೇಣಿಕೃತ ಸಮಾಜದಲ್ಲಿ ಇವರ ಹೋರಾಟ ನಿರೀಕ್ಷಿತ ಫಲ ನೀಡಲಿಲ್ಲ. ಇವರೆಲ್ಲ ತಮ್ಮ ತಮ್ಮ ಗುಂಪುಗಳನ್ನು ಕಟ್ಟಿಕೊಂಡು ದ್ವೀಪಗಳಾಗಿಯೇ ಉಳಿದರು. ಪಂಡರಾಪುರ ಇವರನ್ನೆಲ್ಲ ಸೆಳೆಯುವ ಕೇಂದ್ರವಾಗಿದ್ದರೂ ಇವರೆಲ್ಲ ಒಂದೆಡೆ ಕುಳಿತು ಅನುಭವ ಮಂಟಪದಂತೆ ವಿಚಾರ ಮಂಥನವನ್ನು ಮಾಡಿಕೊಳ್ಳಲಿಲ್ಲ. ಇವರೆಲ್ಲರಿಗೆ ತಕ್ಷಣದ ಆಧ್ಯಾತ್ಮಿಕ ಸಮಾನತೆಯ ಮುಖ್ಯವಾಯಿತು. ಭಕ್ತರೆಲ್ಲರೂ ಸಮಾನ ರಾದರು; ತಮ್ಮ ಕೆಲಸ ಮುಗಿಯಿತು ಎಂದು ಭಾವಿಸಿಕೊಂಡರು. ಇಲ್ಲಿ ಸಾಮಾಜಿಕ ಸಮಾನತೆ ಸಾಧ್ಯವಾಗಲೇ ಇಲ್ಲ. ಇಲ್ಲಿನ ಭಕ್ತಿ ಚಳುವಳಿ ಧಾರ್ಮಿಕವಾಗಿ ಸಾಮಾಜಿಕವಾಗಿ ಕ್ರಾಂತಿಯನ್ನು ಗೈಯುಲು ಸಾಧ್ಯವಾಗಲಿಲ್ಲ. ಮಹಾರಾಷ್ಟ್ರದಲ್ಲಿ ಭಕ್ತಿ ಚಳುವಳಿಯಲ್ಲಿ ಕೆಳವರ್ಗದವರು ದೊಡ್ಡ ಪ್ರಮಾಣದಲ್ಲಿದ್ದರೂ ಸಮರ್ಥ ನಾಯಕತ್ವದ ಕೊರತೆ ಎದ್ದು ಕಾಣುತ್ತಿತ್ತು. ಅಲ್ಲಿ ಭಕ್ತಿ ಮುಖ್ಯವಾಗಿ ಪ್ರಗತಿಪರ ಚಿಂತನೆ ಮೂಕವಾಯಿತು, ಮಂಕಾಯಿತು.

ಕರ್ನಾಟಕದಲ್ಲಿ ವಚನಕಾರರು, ಸಂಘಟಿತರಾಗಿ ಹೋರಾಟವನ್ನು ಮಾಡಿದರು. ಅವರಿಗೆ ಬಸವಣ್ಣ, ಪ್ರಭುದೇವ, ಚನ್ನಬಸವಣ್ಣರಂಥ ಸಮರ್ಥ ನಾಯಕರ ಮುಂದಾಳತ್ವ ಸಿಕ್ಕಿತು. ಸುಮಾರು ಮುನ್ನೂರರಷ್ಟು ಶಿವಶರಣರು, ಐವತ್ತಕ್ಕೂ ಹೆಚ್ಚು ಮಹಿಳಾ ಶರಣರು ಈ ಸಂಘಟನೆಯಲ್ಲಿದ್ದರೆಂಬುದು ಉಲ್ಲೇಖನೀಯ ಅಂಶ. "ವಚನ ಚಳುವಳಿ ಬಹುತೇಕ ಕೆಳಜಾತಿ ಕೆಳವರ್ಗ ಜನತೆಯ ಕಾರಣದಿಂದಲೇ ಒಂದು ದೊಡ್ಡ ಶಕ್ತಿಯಾಗಲು ಕಾರಣ ವಾಯಿತು. ವರ್ಣ ವ್ಯವಸ್ಥೆಯ ಶ್ರೇಣೀಕರಣವನ್ನು ಮುರಿದು ಸಮಾನ ವ್ಯಕ್ತಿತ್ವದ ಆಧಾರದ ಮೇಲೆ ಧಾರ್ಮಿಕ ಪಂಥವೊಂದನ್ನು ನಿರ್ಮಾಣ ಮಾಡುವ ಕೆಲಸವು ಇಲ್ಲಿ ನಡೆಯಿತು. ವಚನ ಚಳುವಳಿಗೆ ಧಾರ್ಮಿಕ ಶಿಸ್ತೊಂದು ಬಂದದ್ದು ಬಸವಣ್ಣ, ಚನ್ನಬಸವಣ್ಣ, ಅಲ್ಲಮಪ್ರಭು ಮುಂತಾದ ಕೆಲವು ಮುಖ್ಯಸ್ಥರಿಂದ ಎಂದು ಹೇಳಬಹುದು. ಹಿಂದೂ ವ್ಯವಸ್ಥೆಯ ರಚನಾ ಸ್ವರೂಪವನ್ನೇ ಪ್ರಶ್ನಿಸಿದ



ವಚನಕಾರರು, ಉಳಿದ ಭಕ್ತಿಪಂಥಗಳ ಹಾಗೆ ಕೇವಲ ನೀತಿ ನೆಲೆಯಲ್ಲಿಯೇ ನಿಲ್ಲದೆ ಹೊಸ ಸಾಮಾಜಿಕ ಸ್ವರೂಪಗಳ, ಹೊಸ ಸಿದ್ಧಾಂತಗಳ ಆವಿಷ್ಕಾರ ಮಾಡುವುದನ್ನು ತಮ್ಮ ಮುಖ್ಯ ಗುರಿಯನ್ನಾಗಿಟ್ಟುಕೊಂಡರು" ಎಂಬ ಬಸವರಾಜ ಕಲ್ಗುಡಿ ಅವರ ತರ್ಕ ಸಮಂಜಸವಾಗಿದೆ.

ವಚನಕಾರರು ಕ್ರಿಯಾಶೀಲರಾಗಿ ಸಾಮಾಜಿಕ ಧಾರ್ಮಿಕ ನೆಲೆಗಳೆರಡರಲ್ಲೂ ಹೊಸ ರಚನೆಯನ್ನು ರೂಪಿಸಿದ್ದು ಈ ಚಳುವಳಿಯ ಧನಾತ್ಮಕ ಅಂಶ. "ವಚನ ಚಳುವಳಿಯ ಪ್ರಮುಖ ಉದ್ದೇಶವೇ ಕರ್ನಾಟಕ ಸಂಸ್ಕೃತಿಯಲ್ಲಿ ಅಡಕವಾಗಿದ್ದ ಸಾಂಪ್ರದಾಯಿಕ ನೆಲೆಗಳ ಸ್ಪಷ್ಟ ವಿರೋಧವಾಗಿದೆ. ಭಕ್ತಿ ಪಂಥದ ಚಳುವಳಿಯಲ್ಲಿ ತಮಿಳುನಾಡಿನ ಶೈವ, ವೈಷ್ಣವ ಸ್ಫೋಟದ ಅನಂತರ, ಮೊಟ್ಟಮೊದಲ ಪುನರುತ್ಥಾನ ಕರ್ನಾಟಕದ ವಚನಕಾರ ರಿಂದಲೇ ಆಗಿರುವುದು ಗಮನಿಸಬೇಕಾದ ಸಂಗತಿ ಯಾಗಿದೆ"[1] ಶಿವಶರಣರ ಆಂದೋಲನ ಉದಾರ ನೆಲೆಯ ಸಮಷ್ಟಿ ಪರವಾದ, ಸಮುದಾಯ ಪರವಾದ ಧೋರಣೆಗಳನ್ನು ಸಂತತವಾಗಿ ನಡೆಸಿಕೊಂಡು ಸಾಗಿದ್ದು ಭಾರತದ ಭಕ್ತಿಪಂಥದ ಇತಿಹಾಸದಲ್ಲಿ ಒಂದು ಮೈಲುಗಲ್ಲು. ಉತ್ತರ ಭಾರತದ 'ಭಕ್ತಿಪಂಥ'ಗಳು ವರ್ಣಭೇದ, ಜಾತಿಭೇದವನ್ನು ಖಂಡಿಸಿದರೂ ಅವು ಜನಸಾಮಾನ್ಯರ ಮೇಲೆ ಅಷ್ಟಾಗಿ ಪರಿಣಾಮ ಬೀರಲಿಲ್ಲ. ಅಲ್ಲಿ ನೀತಿಬೋಧೆ, ಸಂಕುಚಿತ ನಿಲುವು ರಾರಾಜಿಸಿತು. ಆಳುವ ವರ್ಗದ ದರ್ಪ, ಜಮೀನ್ದಾರಿ ಪದ್ಧತಿಯ ಹಿಡಿತ, ಪುರೋಹಿತಶಾಹಿಗಳ ದಬ್ಬಾಳಿಕೆಯ ಮುಂದೆ ಸುಧಾರಣಾವಾದಿಗಳು ಬರೀ ಕಂಠಶೋಷಣೆ ಮಾಡಿದಂತಾಯಿತು. ಹೀಗಾಗಿ ಅಲ್ಲಿ ಸಾಮಾಜಿಕ ಪರಿವರ್ತನೆಯ ಸೊಲ್ಲು ಕ್ಷೀಣವಾಯಿತು.

ಭಾರತೀಯ ಸುಧಾರಣಾವಾದಿ ಚಳುಳಿ ಪರಂಪರೆ ಯಲ್ಲಿ ಕರ್ನಾಟಕದ ಶಿವಶರಣರದು ಅಮೋಘ ಸಾಧನೆ. ಶರಣರ ಸಾಧನೆ ಭಾರತೀಯ ಭಕ್ತಿ ಸಾಹಿತ್ಯ ಇತಿಹಾಸದಲ್ಲಿ ಒಂದು ಮಹಾಪರ್ವ. 'ಪ್ರಾಚೀನ ದ್ರಾವಿಡ ಭಾಷಾ ಸಾಹಿತ್ಯದಲ್ಲಿ 'ವಚನ ಚಳುವಳಿ' ಒಂಟಿ ತಾರೆಯಂತೆ ನಮಗೆ ಕಾಣುತ್ತದೆ' ಎಂಬ ರಹಮತ್ ತರೀಕೆರೆ ಅವರ ಮಾತಿನಲ್ಲಿ ಉತ್ಪ್ರೇಕ್ಷೆಯಿಲ್ಲ. ಹೀಗೆ ಬಹುರೂಪಿತನದಿಂದ ಬರೇ ದ್ರಾವಿಡ ಭಾಷಾ ಸಾಹಿತ್ಯವಷ್ಟೇ ಅಲ್ಲ, ಇಡೀ ಭಾರತೀಯ ಭಾಷಾ ಸಾಹಿತ್ಯದಲ್ಲಿ ವಚನವಾಙ್ಮಯ ವಿಶೇಷವಾದ ನೆಲೆಬೆಲೆಯನ್ನು ಗಳಿಸಿಕೊಂಡಿದೆ.

(ಕೃಪೆ: ಅನುಭಾವ ಸಾಹಿತ್ಯದ ವಿಭಿನ್ನ ನೆಲೆಗಳು)

೧. ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ, ಕ.ಸಾ.ಪ., ಬೆಂಗಳೂರು, ೧೯೮೮, ಪುಟ ೨೩೮.

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ, ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿ ಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು **ಸಿದ್ಧಗಂಗಾ ಮಾಸಪತ್ರಿಕೆ** ಹೆಸರಿನಲ್ಲಿ ನಗದು/ಚೆಕ್/ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (LM) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಾರ್ಡಿನಲ್ಲಿ ಬರೆದು ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ.

**ಪ್ರಕಾಶಕರು,**
**'ಸಿದ್ಧಗಂಗಾ' ಮಾಸಪತ್ರಿಕೆ,**
**ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪.**
**ದೂರವಾಣಿ : ೦೮೧೬-೨೨೮೨೨೨೨**

ವರದಿ

# ಹಾಸನದ ತಣ್ಣೀರುಹಳ್ಳ ಮಠದಲ್ಲಿ ಶ್ರೀಮನ್ನಿರಂಜನ ನಿರಾಭಾರಿ ಜಂಗಮ ಪಟ್ಟಾಧಿಕಾರ ಮಹೋತ್ಸವ

ಹಾಸನದ ತಣ್ಣೀರುಹಳ್ಳ ಮಠದ ನೂತನ ಉತ್ತರಾಧಿಕಾರಿ ಪಟ್ಟಾಧಿಕಾರ ಮಹೋತ್ಸವ ಆಗಸ್ಟ್ ೨೨ ರಂದು ವಿವಿಧ ಮಠಗಳ ಹರಗುರು ಚರಮೂರ್ತಿಗಳ ಸಮ್ಮುಖದಲ್ಲಿ ವಿಧಿವತ್ತಾಗಿ ನಡೆಯಿತು.

ಪೂಜ್ಯ ಶ್ರೀ ಶ್ರೀ ವಿಜಯಕುಮಾರ ಸ್ವಾಮೀಜಿ ಅವರ ಶ್ರೀಮನ್ನಿರಂಜನ ನಿರಾಭಾರಿ ಜಂಗಮ ಪಟ್ಟಾಧಿಕಾರ ಮಹೋತ್ಸವ ಸಮಾರಂಭದ ದಿವ್ಯಸಾನ್ನಿಧ್ಯ ವಹಿಸಿದ್ದ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಶಿವನುಡಿಗಳಲ್ಲಿ "ಸಮಾಜದಲ್ಲಿ ಸುಸಂಸ್ಕೃತ, ಸುಶಿಕ್ಷಿತ ವ್ಯಕ್ತಿಗಳು ಉತ್ತಮ ಜೀವನ ನಡೆಸುತ್ತಿರುವುದಕ್ಕೆ ಮಠಗಳು ನೀಡುತ್ತಿರುವ ಸಂಸ್ಕಾರ, ಶಿಕ್ಷಣ ಕೊಡುಗೆಯೇ ಕಾರಣ, ಧಾರ್ಮಿಕ ಹಾಗೂ ಆಧ್ಯಾತ್ಮಿಕ ದಾಸೋಹದಲ್ಲಿ ತೊಡಗಿರುವ ತಣ್ಣೀರುಹಳ್ಳ ಮಠದ ಸೇವೆ ಸ್ಮರಣೀಯ. ಶ್ರೀಮಠದ ಪೀಠಾಧಿಪತಿಗಳಾಗಿದ್ದ ಲಿಂಗೈಕ್ಯ ಶ್ರೀ ಶಿವಲಿಂಗ ಸ್ವಾಮೀಜಿ ಅವರು ತಮ್ಮ ಕಠಿಣ ಪರಿಶ್ರಮದಿಂದ ಎತ್ತಿನಗಾಡಿಯಲ್ಲಿ ಹಳ್ಳಿ ಹಳ್ಳಿ ತಿರುಗಿ ಭಿಕ್ಷಾಟನೆ ಮೂಲಕ ಸಾಮಾಜಿಕ, ಶೈಕ್ಷಣಿಕ ಹಾಗೂ ಧಾರ್ಮಿಕ ನೆಲೆಗಟ್ಟಿನಲ್ಲಿ ಮಠಕ್ಕೆ ಭದ್ರ ಬುನಾದಿ ಹಾಕಿದರಲ್ಲದೆ ಅಭಿವೃದ್ಧಿ ಪಥದಲ್ಲಿ ಮುನ್ನಡೆಯುವಂತೆ ಮಾಡಿದ್ದರು" ಎಂದು ಶ್ಲಾಘಿಸಿದರು.

"ಸಮಾಜ ಮತ್ತು ಮಠಗಳ ನಡುವಿನ ಸಂಬಂಧ ನೀರು ಮತ್ತು ಮೀನಿನಂತಿರಬೇಕು. ಒಂದನೊಂದು ಬಿಟ್ಟಿರಲಾರದಂತಹ ಹೊಂದಾಣಿಕೆಯಿದ್ದಾಗ ಮಾತ್ರವೇ ಸ್ವಸ್ಥ ಸಮಾಜ ನಿರ್ಮಾಣ ಸಾಧ್ಯ. ನಮ್ಮ ನಾಡು ಶಾಂತಿ ಸುಭಿಕ್ಷವಾಗಿರುವುದರ ಹಿಂದೆ ಮಠಗಳ ಕೊಡುಗೆ ಅಪಾರವಾಗಿದೆ" ಎಂದು ಹೇಳಿದರು.

ಪೀಠಾಧಿಕಾರ ಸ್ವೀಕರಿಸಿದ ಪೂಜ್ಯ ಶ್ರೀ ಶ್ರೀ ವಿಜಯಕುಮಾರ ಸ್ವಾಮೀಜಿ ಅವರು ತಮ್ಮ ಕೃತಜ್ಞತಾ ನುಡಿಗಳಲ್ಲಿ "ತಣ್ಣೀರುಹಳ್ಳ ಮಠ ತನ್ನದೇ ಆದ ಭವ್ಯ ಪರಂಪರೆ ಹೊಂದಿದೆ. ಅದು ಸಮಾಜದ ಉನ್ನತಿಗಾಗಿ ಕೈಗೊಂಡಿರುವ ಧಾರ್ಮಿಕ, ಶೈಕ್ಷಣಿಕ, ಸಾಮಾಜಿಕ ಕಾರ್ಯಗಳನ್ನು ಹಿರಿಯ ಶ್ರೀಗಳ ಮಾರ್ಗದರ್ಶನದಲ್ಲಿ, ಸಮಾಜ ಬಾಂಧವರ



ವಿಶ್ವಾಸದೊಂದಿಗೆ ಮುಂದುವರಿಸಿಕೊಂಡು ಹೋಗುವುದಾಗಿ" ಹೇಳಿದರು.

ಸಮಾರಂಭದಲ್ಲಿ ಕನಕಪುರ ಶ್ರೀ ದೇಗುಲಮಠದ ಪೂಜ್ಯ ಶ್ರೀ ಶ್ರೀ ಚೆನ್ನಬಸವ ಸ್ವಾಮೀಜಿ, ಸಂಕಲಾಪುರ ಮಠದ ಪೂಜ್ಯ ಶ್ರೀ ಶ್ರೀ ಚನ್ನಬಸವ ದೇಶಿಕೇಂದ್ರ ಸ್ವಾಮೀಜಿ, ತೊರೆನೂರು ಮಠದ ಶ್ರೀ ಶ್ರೀ ಮಲ್ಲೇಶ್ವರ ಸ್ವಾಮಿಗಳು, ಅರಮೇರಿಮಠದ ಶ್ರೀ ಶ್ರೀ ಶಾಂತ ಮಲ್ಲಿಕಾರ್ಜುನ ಸ್ವಾಮಿಗಳು. ಚಕ್ರಭಾವಿ ಮಠದ ಶ್ರೀ ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು, ಕಿರಿಕೊಡ್ಲಿಮಠದ ಶ್ರೀ ಶ್ರೀ ಸದಾಶಿವ ಸ್ವಾಮಿಗಳು, ಶಿಡಗಳಲೆ ಮಠದ ಶ್ರೀ ಶ್ರೀ ಇಮ್ಮಡಿ ಶಿವಲಿಂಗ ಸ್ವಾಮಿಗಳು, ಮಲ್ಲರದೊರೆ ಮಠದ ಶ್ರೀ ಶ್ರೀ ಚನ್ನಬಸವ ಸ್ವಾಮಿಗಳು, ಕರಡಿಗವಿ ಮಠದ ಶ್ರೀ ಶ್ರೀ ಶಿವಶಂಕರ ಶಿವಯೋಗಿ ಸ್ವಾಮಿಗಳು, ತೆಂಕಲಗೂಡು ಬೃಹನ್ಮಠ ಯಸಳೂರು ಶ್ರೀ ಶ್ರೀ ಚನ್ನಸಿದ್ಧೇಶ್ವರ ಶಿವಾಚಾರ್ಯ ಸ್ವಾಮಿಗಳು, ಕಾರ್ಜುಹಳ್ಳಿ ಹಿರೇಮಠದ ಷ.ಬ್ರ. ಶ್ರೀ ಶ್ರೀ ಸದಾಶಿವ ಶಿವಾಚಾರ್ಯ ಸ್ವಾಮಿಗಳು ಹಾಗೂ ಮಠದ ಅಭಿವೃದ್ಧಿ ಸಂಸ್ಥೆಯ ಕಾರ್ಯದರ್ಶಿ ಶ್ರೀ ಬಿ.ಪಿ. ಸೋಮಣ್ಣ, ಅಖಿಲ ಭಾರತ ವೀರಶೈವ ಮಹಾಸಭಾದ ಜಿಲ್ಲಾಧ್ಯಕ್ಷ ಶ್ರೀ ಬಿ.ಆರ್. ಗುರುದೇವ್, ಆಲೂರು ಶ್ರೀ ರೇಣುಕಾ ಪ್ರಸಾದ್, ಸಕಲೇಶಪುರ ಶ್ರೀ ದೇವರಾಜ್, ಶ್ರೀ ವಿದ್ಯಾಶಂಕರ್, ಶ್ರೀ ಬಿ.ಪಿ. ಧರಣೀಂದ್ರ, ಶ್ರೀ ಎಂ.ಎಸ್. ಪರಮಶಿವಪ್ಪ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

ಕಾರ್ಯಕ್ರಮ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಶ್ರೀ ಬಿ.ಎಸ್. ಕಾಂತರಾಜು ಸ್ವಾಗತಿಸಿದರು. ಜಿಲ್ಲಾ ವೀರಶೈವ ಲಿಂಗಾಯತ ಸಂಘದ ಅಧ್ಯಕ್ಷ ಶ್ರೀ ಬಿ.ಸಿ. ಐಷಾಮಿಗೌಡ ಮಠದ ವರದಿ ಸಲ್ಲಿಸಿದರು. ಶ್ರೀ ಅಹಮದ್ ಹಗರೆ ಕಾರ್ಯಕ್ರಮ ನಿರೂಪಿಸಿದರು.



## ಶ್ರೀ ಸಿದ್ಧಗಂಗಾ ಮಠದ ಆಧ್ಯಾತ್ಮಿಕ ಕಮ್ಮಟದಲ್ಲಿ ಅರಳಿದ ನೂತನ ಪೀಠಾಧಿಕಾರಿ ಪೂಜ್ಯ ಶ್ರೀ ವಿಜಯಕುಮಾರ್ ಸ್ವಾಮೀಜಿ

ತಣ್ಣೀರುಹಳ್ಳ ಮಠದ ನೂತನ ಪೀಠಾಧಿಕಾರಿ ಪೂಜ್ಯ ಶ್ರೀ ಶ್ರೀ ವಿಜಯಕುಮಾರ ಸ್ವಾಮೀಜಿ ಅವರು ಶ್ರೀ ಸಿದ್ಧಗಂಗಾ ಮಠದ ಆಧ್ಯಾತ್ಮಿಕ ಕಮ್ಮಟದಲ್ಲಿ ರೂಪುಗೊಂಡವರು. ಅವರ ಪೂರ್ವಾಶ್ರಮದ ಹೆಸರು ಶ್ರೀ ಪ್ರಕಾಶ್, ಮೈಸೂರು ಜಿಲ್ಲೆ ಗುಂಡ್ಲುಪೇಟೆ ತಾಲ್ಲೂಕು, ಬೊಮ್ಮಲಾಪುರದಲ್ಲಿ ಶರಣ ದಂಪತಿಗಳಾದ ಶ್ರೀ ಸೋಂಪ (ಚಿಕ್ಕ ಬೆಳ್ಳಪ್ಪ) ಹಾಗೂ ಶ್ರೀಮತಿ ನೀಲಮ್ಮ ಅವರ ಪುತ್ರರಾಗಿ ಫೆಬ್ರವರಿ ೧೭, ೧೯೭೪ ರಲ್ಲಿ ಜನಿಸಿದರು. ಪ್ರಾಥಮಿಕ ಶಿಕ್ಷಣವನ್ನು ಹುಟ್ಟಿದೂರಿನಲ್ಲಿ, ಪ್ರೌಢಶಾಲಾ ಶಿಕ್ಷಣವನ್ನು ಕನಕಪುರ ದೇಗುಲಮಠದಲ್ಲಿ ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ಮಾರ್ಗದರ್ಶನದಲ್ಲಿ ನಡೆಯಿತು. ನಂತರ ೧೯೯೫ ರಲ್ಲಿ ಶ್ರೀ ಸಿದ್ಧಗಂಗಾ ಮಠಕ್ಕೆ ತೆರಳಿ ತ್ರಿವಿಧ ದಾಸೋಹಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಆಶ್ರಯ ಹಾಗೂ ದಿವ್ಯಮಾರ್ಗದರ್ಶನದಲ್ಲಿ ಕನ್ನಡ ಪಂಡಿತ, ಸಂಸ್ಕೃತ, ವೇದಾಧ್ಯಯನ ಮಾಡಿದರು.

ಶ್ರೀ ಪ್ರಕಾಶ್ ಅವರ ಶಿವಪೂಜಾ ನಿಷ್ಠೆ, ಆಧ್ಯಾತ್ಮಿಕ ಒಲವು, ಕಾಯಕ ನಿಷ್ಠೆ, ಸೇವಾಭಾವನೆ ಇವುಗಳನ್ನು ಹತ್ತಿರದಿಂದ ಸೂಕ್ಷ್ಮವಾಗಿ ಗಮನಿಸಿದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಮೈಸೂರು ಜಿಲ್ಲೆಯ ಕೆ.ಆರ್. ನಗರ ತಾಲ್ಲೂಕಿನ ಅಂಕನಹಳ್ಳಿ ಬಸವ ಕಲ್ಯಾಣದ ವಿರಕ್ತ ಮಠದ ಉತ್ತರಾಧಿಕಾರಿಯಾಗಿ ನೇಮಕ ಮಾಡಿದರು. ತಾವು ಆ ಮಠದ ಪೀಠಾಧ್ಯಕ್ಷರಾದ ಮೇಲೆ ಮಠವನ್ನು ಭಕ್ತರ ಸಹಕಾರದಿಂದ ಅಭಿವೃದ್ಧಿ ಪಥದಲ್ಲಿ ಮುನ್ನಡೆಸುತ್ತಿದ್ದರು.

ಈ ಮಧ್ಯೆ ತಣ್ಣೀರುಹಳ್ಳ ಮಠದ ಪೀಠಾಧ್ಯಕ್ಷರಾಗಿದ್ದ ಪೂಜ್ಯ ಶ್ರೀ ಶ್ರೀ ಶಿವಲಿಂಗ ಸ್ವಾಮೀಜಿ ಅವರು ೧೨ ವರ್ಷಗಳ ಹಿಂದೆ ಲಿಂಗೈಕ್ಯರಾದ ನಂತರ ಮಠಕ್ಕೆ ಉತ್ತರಾಧಿಕಾರಿಯನ್ನು ನೇಮಿಸಿರಲಿಲ್ಲ. ಮಠದ ಭಕ್ತರು, ಅಭಿಮಾನಿಗಳು ಸಭೆ ಸೇರಿ ಒಮ್ಮತದಿಂದ ಪೂಜ್ಯ ಶ್ರೀ ಶ್ರೀ ವಿಜಯಕುಮಾರ ಸ್ವಾಮೀಜಿಯವರನ್ನು ಆಯ್ಕೆ ಮಾಡಿ ಹರಗುರುಗಳ ಸಮ್ಮುಖದಲ್ಲಿ ಮಠದ ಪೀಠಾಧಿಕಾರಿಯನ್ನಾಗಿ ಮಾಡಲಾಯಿತು.



ಕ್ಷೇತ್ರ ವಾರ್ತೆ

# ಮಹಾತ್ಮ ಗಾಂಧೀಜಿ ಮತ್ತು ಲಾಲ್ ಬಹದ್ದೂರ್ ಶಾಸ್ತ್ರೀಜಿಯವರ ಜಯಂತಿ




ಅಕ್ಟೋಬರ್ ೨ ರಂದು ಸಂಜೆ ೬.೦೦ ಗಂಟೆಗೆ ಶ್ರೀ ಮಠದ ಸಂಯುಕ್ತ ವಿದ್ಯಾರ್ಥಿ ಸಂಘ ಹಾಗೂ ಸನಿವಾಸ ವಿದ್ಯಾ ಸಂಸ್ಥೆಗಳ ಆಶ್ರಯದಲ್ಲಿ ಕೋವಿಡ್ ನಿಯಮದ ಅಡಿಯಲ್ಲಿ ನಮ್ಮ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟ ಮಹಾತ್ಮ ಗಾಂಧೀಜಿ ಮತ್ತು ಆಧುನಿಕ ಭಾರತದ ರೂವಾರಿ ಲಾಲ್‌ಬಹದ್ದೂರ್ ಶಾಸ್ತ್ರೀಜಿಯವರ ಜಯಂತಿಯನ್ನು ಆಯೋಜಿಸಲಾಗಿತ್ತು. ಈ ಕಾರ್ಯಕ್ರಮದ ದಿವ್ಯಸಾನ್ನಿಧ್ಯವನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ವಹಿಸಿ ಆಶೀರ್ವದಿಸಿದರು.

ಬಾಪೂಜಿ ವಿದ್ಯಾಸಂಸ್ಥೆಯ ಸಂಸ್ಥಾಪಕ ಅಧ್ಯಕ್ಷರಾದ ಶ್ರೀ ಎಂ. ಬಸವಯ್ಯನವರು ಮಹಾತ್ಮ ಗಾಂಧೀಜಿಯವರ ಜೀವನ ಮೌಲ್ಯಗಳ ಬಗ್ಗೆ ತಿಳಿಸುತ್ತಾ ಸರಳ ಧಾರ್ಮಿಕ ನಂಬಿಕೆಗಳಿಂದ ಬಂದಂಥ ಸಪ್ತಸೂತ್ರಗಳನ್ನು ಮಕ್ಕಳಿಗೆ ದಾರ್ಶನಿಕರ ನಿದರ್ಶನಗಳನ್ನು ಉದಾಹರಿಸಿ ತಿಳಿಸಿದರು, ಗಾಂಧೀಜಿಯವರ ಮುಖ್ಯ ತತ್ತ್ವಗಳಾದ ಸತ್ಯ ಮತ್ತು ಅಹಿಂಸೆ ಹಾಗೂ ಭಾರತೀಯರ ಧಾರ್ಮಿಕ ವಿಚಾರಗಳನ್ನು ತಿಳಿಸಿದರು.

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸದಸ್ಯರಾದ ಶ್ರೀ ರೋಹಿತ್ ಚಕ್ರತೀರ್ಥರವರು ಲಾಲ್‌ಬಹದ್ದೂರ್ ಶಾಸ್ತ್ರೀಯವರ ಸರಳ ಜೀವನ ಶೈಲಿ, ಹೋರಾಟದ ಬಗ್ಗೆ, ದೇಶಾಭಿಮಾನ ಹಾಗೂ ತತ್ತ್ವಸಿದ್ಧಾಂತಗಳ ಬಗ್ಗೆ ಮಕ್ಕಳಿಗೆ ತಿಳಿಸಿದರು. ಲಾಲ್‌ಬಹದ್ದೂರ್ ಶಾಸ್ತ್ರೀಯವರು ಜವರಲಾಲ್ ನೆಹರೂ ನಂತರ ಭಾರತದ ಪ್ರಧಾನಿಯಾಗಿದ್ದರು. ಇವರು ಭಾರತದ ಸ್ವಾತಂತ್ರ್ಯಕ್ಕೆ ಅವಿರತವಾಗಿ ಹೋರಾಡಿದವರು ಎಂದು ತಿಳಿಸಿದರು.

ಶ್ರೀ ಪಿ.ಆರ್. ಸೋಮಶೇಖರಯ್ಯನವರು ಸ್ವಾಗತಿಸಿದರು. ವಿದ್ವಾನ್ ಶ್ರೀ ಜೆ.ಆರ್. ಸಿದ್ಧಲಿಂಗಸ್ವಾಮಿರವರು ಶರಣು ಸಮರ್ಪಣೆ ಮಾಡಿದರು. ಡಾ|| ಅಮರ ಗುಡ್ಡೆ ಕಾರ್ಯಕ್ರಮವನ್ನು ನಿರೂಪಿಸಿದರು.








ಸ್ಥಾಪನೆ : 1995 | ಶುಭಾಶಯಗಳೊಂದಿಗೆ | ದೂರವಾಣಿ : 2277267

ಭಾರತೀಯ ರಿಸರ್ವ್ ಬ್ಯಾಂಕ್ ಲೈಸೆನ್ಸ್ ಪುರಸ್ಕೃತ | ಫ್ಯಾಕ್ಸ್ : 2277267

# ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,

ಬಿ.ಹೆಚ್.ರಸ್ತೆ, ತುಮಕೂರು-572 102

## ಪ್ರಗತಿ ನೋಟ (31.03.2020ರಲ್ಲಿದ್ದಂತೆ) ಮತ್ತು ಠೇವಣಿಗಳು (ಲಕ್ಷರೂ.ಗಳಲ್ಲಿ)

| | | | |
|---|---|---|---|
| ಸದಸ್ಯರ ಸಂಖ್ಯೆ | 4269 | ಸಾಲಗಳು | 11405.95 |
| ಪಾವತಿಯಾದ ಷೇರು ಬಂಡವಾಳ | 540.79 | ಹೂಡಿಕೆಗಳು | 5738.11 |
| ಆಪದ್ಧನ ಮತ್ತು ನಿಧಿಗಳು | 2224.83 | ದುಡಿಯುವ ಬಂಡವಾಳ | 18570.13 |
| ಠೇವಣಿಗಳು | 15804.51 | ನಿವ್ವಳ ಲಾಭ (ತೆರಿಗೆ ನಂತರ) | 163.05 |

## ಠೇವಣಿ ಮೇಲಿನ ಬಡ್ಡಿ ದರಗಳು

| | | | |
|---|---|---|---|
| 46 ದಿವಸಗಳಿಂದ 90 ದಿವಸಗಳವರೆಗೆ | - ಶೇ. 4.5% | 181 ದಿವಸಗಳಿಂದ 365 ದಿವಸಗಳವರೆಗೆ | - ಶೇ. 6% |
| 91 ದಿವಸಗಳಿಂದ 180 ದಿವಸಗಳವರೆಗೆ | - ಶೇ. 5% | 1 ವರ್ಷ ಮೇಲ್ಪಟ್ಟು | - ಶೇ. 7% |

ಹಿರಿಯ ನಾಗರಿಕರಿಗೆ,

ಒಂದು ವರ್ಷ ಮೇಲ್ಪಟ್ಟ ಠೇವಣಿಗಳ ಮೇಲೆ ½% ಅಧಿಕ ಬಡ್ಡಿ ದರವನ್ನು ಅವರ ಠೇವಣಿಗಳ ಮೇಲೆ ನೀಡಲಾಗುವುದು.

ಒಂದು ಲಕ್ಷದವರೆಗಿನ ಠೇವಣಿಗಳ ವಿಮಾ ರಕ್ಷಣೆ ಇದೆ. (ಡಿ.ಐ.ಸಿ.ಜಿ.ಸಿ.)

ಜಂಟಿಸಾಲ, ಗೃಹನಿರ್ಮಾಣ ಸಾಲ, ಆಸ್ತಿ ಅಡಮಾನ ಸಾಲ, ಹೊಸ/ಹಳೆಯ ವಾಹನಾಧಾರ ಸಾಲ, ಯಂತ್ರೋಪಕರಣ ಸಾಲ, ವಸ್ತು ಬಳಕೆದಾರರ ಸಾಲ, ಮೀರಳೆತ, ವೇತನಾಧಾರ, ಚಿನ್ನಾಭರಣ ಸಾಲಗಳಿಗೆ ಬಡ್ಡಿದರ ಶೇ. 13 ರಿಂದ 15

## ಶಾಖೆಗಳು :

**ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,**
ಸಿದ್ಧಗಂಗಾ ಕಾಲೇಜ್ ಕ್ಯಾಂಪಸ್, ಗಾಂಧಿನಗರ
ಬಿ.ಹೆಚ್. ರಸ್ತೆ, ತುಮಕೂರು
ಫೋನ್ : 0816-2277273

**ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,**
ಹಾಸ್ಪಿಟಲ್ ರಸ್ತೆ, ದಾಬಸಪೇಟೆ (ಸೋಂಪುರ)
ನೆಲಮಂಗಲ ತಾ॥, ಬೆಂಗಳೂರು ಗ್ರಾಮಾಂತರ ಜಿಲ್ಲೆ
ಫೋನ್ : 080-7735409

**ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,**
ಕೆ.ಎಸ್.ಆರ್.ಟಿ.ಸಿ. ಬಸ್ ಸ್ಟಾಂಡ್ ರಸ್ತೆ,
ಒಕ್ಕಲಿಗರ ಸಮುದಾಯ ಭವನದ ಎದುರು
ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ.
ಫೋನ್ : 080-27622090

**ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,**
ವಿಜಯನಗರ ಶಾಖೆ. 27/1, 3ನೇ ಮುಖ್ಯ ರಸ್ತೆ, 3ನೇ ಅಡ್ಡರಸ್ತೆ,
ವಿಜಯನಗರ, ಬೆಂಗಳೂರು- 560 040
ಫೋನ್ : 080-23301270

ಶ್ರೀ ಟಿ.ಕೆ. ನಂಜುಂಡಪ್ಪ
ಅಧ್ಯಕ್ಷರು

ಶ್ರೀ ಕೆ.ಎಸ್. ಶಂಕರಯ್ಯ
ಉಪಾಧ್ಯಕ್ಷರು

**ನಿರ್ದೇಶಕರು**

| | | |
|---|---|---|
| ಶ್ರೀ ಮಹೇಶಪ್ಪ | ಶ್ರೀ ಟಿ.ಎಮ್. ಸ್ವಾಮಿ | ಶ್ರೀ ಎಸ್. ವಿಶ್ವನಾಥಯ್ಯ |
| ಶ್ರೀ ಡಾ. ಆರ್.ಸಿ. ಮುಟ್ಟಬುದ್ದಿ | ಶ್ರೀ ರಾಮಯ್ಯ | ಶ್ರೀಮತಿ ರೇಣುಕಾ ಲತಾ. ಎಸ್. |
| ಶ್ರೀಮತಿ ಮಂಜುಳಾ ಪ್ರಸಾದ್ | ಶ್ರೀ ಬಿ.ಎಸ್. ರುದ್ರೇಶಯ್ಯ | ಶ್ರೀ ಕೆ.ಎಮ್. ಸ್ವಾಮಿ |
| ಶ್ರೀ ಡಾ. ಎಸ್. ಪರಮೇಶ್ | ಶ್ರೀ ಚಿಕ್ಕಯ್ಯ. ಆರ್. | |

ಹೆಚ್.ಕೆ.ಶಿವಪ್ರಕಾಶ್
ಮುಖ್ಯಕಾರ್ಯನಿರ್ವಹಣಾಧಿಕಾರಿಗಳು

"Siddaganga" Monthly - Postal Reg. No. L2/RNP/385/TMR/2021-23
Posted at RMS, Tumkur-572 102

RNI No. 17139/69



To

If undelivered please return to :
Editor
Siddaganga Monthly Magazine
Siddaganga Math
Tumkur-572 104

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bengaluru 10. Ph : 23404232

email ID : geetanjaligraphics@gmail.com